# ಬ್ರಹ್ಮಸೂತ್ರಗಳ ಬೆಳಕು





— ಹೊಸಕೆರೆ ಚಿದಂಬರಯ್ಯ —



—ಹೊಸಕೆರೆ ಚಿದಂಬರಯ್ಯ—

# ಬ್ರಹ್ಮಸೂತ್ರಗಳ ಬೆಳಕು

ಲೇಖಕ:

**ಹೊಸಕೆರೆ ಚಿದಂಬರಯ್ಯ**

ಜೀವನ್ಮುಕ್ತಿವಿವೇಕ, ಭಗವದ್ಗೀತಾಸಾರವಿಚಾರ, ಆರ್ಯಧರ್ಮಪ್ರದೀಪ, ಗೀತಾರ್ಥಚಂದ್ರಿಕೆ,
ಅನುಭವಾಮೃತದ ಟೀಕು, ಪಂಚದಶೀತತ್ತ್ವಾರ್ಥ, ವೇದಾಂತದ ಜೀವಾಳ,
ವೇದಾಂತದ ರೂಪರೇಖೆ, ಗೀತೆಯ ತಿರುಳು, ಗೀತೆಯ ಕೈಗನ್ನಡಿ,
ಮಕ್ಕಳ ಕೈಗೀತೆ–ಮೊದಲಾದವುಗಳ
ಗ್ರಂಥಕರ್ತ

ಮೊದಲನೆ ಮುದ್ರಣ ೧,೦೦೦ ಪ್ರತಿಗಳು

ಕ್ರಿ. ಶ. ೧೯೩೭ ]

[ಬೆಲೆ ೧ ರೂಪಾಯಿ

# ಮುನ್ನುಡಿ

---

ನಾವು ಈಗ ಭೂಲೋಕದಲ್ಲಿ ಮನುಷ್ಯರಾಗಿದ್ದೇವಷ್ಟೆ. ಈ ಮನುಷ್ಯತ್ವಕ್ಕಾಗಿ ದೇವತೆಗಳು ಕೂಡ ಬಾಯಿಯಲ್ಲಿ ನೀರು ಸುರಿಸುತ್ತಾರೆಂದು ಪುರಾಣಗಳು ಹೇಳುತ್ತವೆ. ದೇವತ್ವವು ಮನುಷ್ಯತ್ವಕ್ಕಿಂತ ಮೇಲಿನ ಮೆಟ್ಟಲೇ ಸರಿ. ಆದರೆ ಅದು ಮೂರು ದಿವಸದ ಬಾಳಿನ ವಿಷಯಸುಖಗಳನ್ನು ಮೇಲಾಗಿ ಆಗಿ ಉಪಭೋಗಿಸುವದರಲ್ಲಿ ಮಾತ್ರ ಮೇಲಿನ ಮೆಟ್ಟಲು. ಶಾಶ್ವತವಾದ ಸುಖದ ಸಂಪಾದನೆಯ ದೃಷ್ಟಿಯಿಂದ ನೋಡಿದರೆ ಮನುಷ್ಯತ್ವವೇ ಮೇಲಿನ ಮೆಟ್ಟಲು. ಏಕೆಂದರೆ ದೇವತೆಗಳಿಗೆ ಉತ್ಕೃಷ್ಟವಾದ ಭೋಗಗಳ ಸಡಗರದಲ್ಲಿ ಆತ್ಮೋನ್ನತಿಯ ದಾರಿಯು ಹೊಳೆಯುವದಿಲ್ಲ. ಮನುಷ್ಯರಿಗಾದರೆ ಭೋಗವು ಮಿತವಾಗಿರುವದರಿಂದ ಆ ದಾರಿ ಮುಂದೆ ಬಂದು ನಿಲ್ಲುವದುಂಟು. ಆದ್ದರಿಂದ ದೇವತೆಗಳು ಕೂಡ ಮನುಷ್ಯತ್ವವನ್ನು ಬಯಸುವರು. ದೇವಲೋಕ ಮೊದಲಾದವುಗಳೆಲ್ಲ ಭೋಗಭೂಮಿಗಳು: ಭೂಲೋಕದಲ್ಲಿ ಮಾಡಿದ ಪುಣ್ಯಪಾಪಗಳಿಗೆ ಫಲವಾದ ಸುಖದುಃಖಗಳ ಅನುಭವವನ್ನು ತಂದುಕೊಡತಕ್ಕವುಗಳು. ಭೂಲೋಕವು ಹಾಗಲ್ಲ. ಇಲ್ಲಿರುವವರು ಹೆಚ್ಚಿನ ಪುಣ್ಯವನ್ನು ಮಾಡಿ ದೇವತೆಗಳೂ ಆಗಬಹುದು; ಬ್ರಹ್ಮಜ್ಞಾನವನ್ನು ಸಂಪಾದನೆ ಮಾಡಿ ದೇವತೆಗಳಿಗೆ ಕೂಡ ಆತ್ಮವಾಗುವಂಥ ಬ್ರಹ್ಮರಾಗಿ ಆತ್ಮಾನಂದವೆಂಬ ಸಮುದ್ರದಲ್ಲಿ ಹಾಯಾಗಿ ತೇಲಾಡುತ್ತಿರಬಹುದು. ಬ್ರಹ್ಮನು ದೇವತೆಗಳ ಮತ್ತು ಮನುಷ್ಯರು ಮೊದಲಾದವರ ಅನೇಕಬಗೆಯ ಶರೀರಗಳನ್ನು ಹುಟ್ಟಿಸಿರುವನಷ್ಟೆ. ಮನುಷ್ಯರ ಶರೀರವನ್ನು ಹುಟ್ಟಿಸಿದಾಗ ಮಾತ್ರ ಅವನಿಗೆ ತನ್ನ ಕೈವಾಡವು ಸಾರ್ಥಕವಾಯಿತೆನಿಸಿತಂತೆ. ಏಕೆಂದರೆ ಜೀವರ ರಾಶಿಗಳಲ್ಲೆಲ್ಲ ಮನುಷ್ಯನೊಬ್ಬನು ಮಾತ್ರ ತನ್ನ ನಿಜವನ್ನು ತಾನು ತಿಳಿದು ಕೃತಾರ್ಥನಾಗಬಲ್ಲನು.

ಮನುಷ್ಯನಿಗೆ ಆ ತಿಳಿವು ಉಂಟಾಗುವದಕ್ಕೆ ಸಾಧಕವಾಗಲೆಂದು ಪರಮಾತ್ಮನು ತನ್ನ ನಿಃಶ್ವಾಸರೂಪವಾದ ಉಪನಿಷತ್ತುಗಳಲ್ಲೆಲ್ಲ ಆ ಸತ್ಯದ ರಹಸ್ಯವನ್ನು ಚೆನ್ನಾಗಿ ಬಿಚ್ಚಿಟ್ಟಿದ್ದಾನೆ. ಆ ತತ್ತ್ವಾರ್ಥವು ಎಂದೆಂದಿಗೂ ಹೇಗೆ ಹೇಗೆ ನೋಡಿದರೂ ಒಂದೇ ಆಗಿರಬೇಕೇ ಹೊರತು ಅನೇಕ ಬಗೆಯಾಗಿರುವ ಸಂಭವವಿಲ್ಲ. ಯಾವಾಗಲೂ ಒಂದೇ ರೀತಿಯಲ್ಲಿರುವದು ಸತ್ಯವೆನಿಸೀತೆ ಹೊರತು ಅನೇಕ ರೀತಿಯಲ್ಲಿರು

ವದು ಸತ್ಯವೆನಿಸಲಾರದು. ಆದರೆ ಉಪನಿಷತ್ತುಗಳನ್ನು ನೋಡಿದರೆ ಕಾಣುವ ಸಂಗತಿಯು ಒಂದೊಂದು ಕಡೆ ಒಂದೊಂದು ರೀತಿಯಲ್ಲಿರುವದು ಕಾಣುವದರಿಂದ ಅದರಲ್ಲಿ ಯಾವದು ಸತ್ಯವೆಂಬದನ್ನು ಹಿಡಿದುಕೊಳ್ಳುವದಕ್ಕೆ ಕಷ್ಟವಾಗುತ್ತದೆ. ಉದಾಹರಣೆ ನೋಡಿ. ಸೃಷ್ಟಿಕ್ರಮದಲ್ಲಿ ಆಕಾಶವು ಮೊದಲೆಂದು ತೈತ್ತಿರೀಯವು ಹೇಳುತ್ತದೆ; ತೇಜಸ್ಸು ಮೊದಲೆಂದು ಛಾಂದೋಗ್ಯವು ಸೂಚಿಸುತ್ತದೆ; ಲೋಕಗಳೇ ಮೊದಲಾದವೆಂದು ಐತರೇಯವು ಅಭಿಪ್ರಾಯಪಡುತ್ತದೆ. ಇವುಗಳಲ್ಲಿ ಯಾವದು ನಿಜವಾಗಿ ಮೊದಲು? ಇವಲ್ಲದೆ ಕೆಲಕೆಲವು ಮಾತುಗಳಿಗೆ ಬೇರೆಬೇರೆಯವರು ಬೇರೆ ಬೇರೆಯಾಗಿ ತಮ್ಮ ಮೂಗಿನ ನೇರಕ್ಕೆ ಅರ್ಥವನ್ನು ಮಾಡುವದಕ್ಕೆ ಬರುವಹಾಗೆ ಇರುವದರಿಂದ ಅಲ್ಲಿಗೆ ಯಾವ ಅರ್ಥವು ಸರಿಯಾದದ್ದೆಂಬುದು ಸಾಮಾನ್ಯಬುದ್ಧಿಗೆ ಮುಂದುಗಾಣದೆ ಹೋಗುತ್ತದೆ. ಉದಾಹರಣೆಗೆ ನೋಡಿ. ಅವ್ಯಕ್ತ ಮತ್ತು ಅಜಾ ಎಂಬ ಮುಂತಾದ ಮಾತುಗಳು ಸಾಂಖ್ಯರ ಪ್ರಧಾನಕ್ಕೂ ಹೊಂದುವ ಹಾಗಿವೆ ಮತ್ತು ವೇದಾಂತಿಗಳ ಮಾಯೆಗೂ ಹೊಂದುವ ಹಾಗಿವೆ. ಇದನ್ನೆಲ್ಲ ನೋಡಿ ಭಗವಾನ್ ವೇದವ್ಯಾಸರು ಒಂದೇ ಸಂಗತಿಯ ಅನೇಕ ರೀತಿಗಳ ಗುಟ್ಟನ್ನು ಒಡೆದು ಸಂಶಯಾಸ್ಪದವಾದ ಮಾತುಗಳ ಅರ್ಥಗಳನ್ನೆಲ್ಲ ನಿರ್ಣಯಿಸಿ ಬ್ರಹ್ಮಸೂತ್ರಗಳನ್ನು ರಚಿಸಿರುತ್ತಾರೆ. ವೇದಾಂತವೆಂದರೆ ಉಪನಿಷತ್ತುಗಳು. ಆ ಉಪನಿಷತ್ತುಗಳ ಅರ್ಥವನ್ನು ನಿರ್ಣಯಿಸುವವು ಬ್ರಹ್ಮಸೂತ್ರಗಳು. ಆದ್ದರಿಂದ ನಿಜವಾದ ವೇದಾಂತದ ಪರಿಚಯವನ್ನು ಪಡೆಯಬೇಕೆನ್ನುವವರು ಬ್ರಹ್ಮಸೂತ್ರಗಳನ್ನು ಅವಶ್ಯಕವಾಗಿ ಅರಗಿಸಿಕೊಳ್ಳಬೇಕು.

ಈ ಗ್ರಂಥವು ಆ ಬ್ರಹ್ಮಸೂತ್ರಗಳ ಅರ್ಥವನ್ನು ಕನ್ನಡಿಗರ ಮುಂದಿಡುವದಕ್ಕೆ ಹೊರಟಿರುವದು. ಬ್ರಹ್ಮವೆಂದರೆ ಬಹು ದೊಡ್ಡ ವಸ್ತುವಾದ ಪರಮಾತ್ಮ. ಸೂತ್ರಗಳೆಂದರೆ ಸೂಚನೆ ಮಾಡುವ ಮಾತುಗಳುಳ್ಳದ್ದೆಂದರ್ಥ. ಒಂದಾನೊಂದು ಕಾಲದಲ್ಲಿ ನಮ್ಮ ದೇಶದಲ್ಲಿ ಸೂತ್ರಗಳನ್ನು ಬರೆಯುವ ಪದ್ಧತಿ ಇತ್ತು. ಅದು ಬಹು ಕಠಿನವಾದ ಕೆಲಸ, ಸೂತ್ರಗಳಲ್ಲಿ ಮುಖ್ಯವಾಗಿ ಅಕ್ಷರಗಳು ಬಹು ಸ್ವಲ್ಪವಿರಬೇಕೆಂದೂ ಅದನ್ನು ವಿವರಿಸುತ್ತ ಹೋದರೆ ಬಹು ದೊಡ್ಡದಾಗುವಷ್ಟು ಅರ್ಥವು ಅದರಲ್ಲಿ ಹೂರಣವಾಗಿರಬೇಕೆಂದೂ ನಿಯಮವಿದೆ. ಆದ್ದರಿಂದ ಸೂತ್ರಗಳ ಅರ್ಥವು ಅನಾಯಾಸವಾಗಿ ತನ್ನ ಪೂರ್ಣರೂಪದಿಂದ ಎದ್ದು ಕಾಣುವದಿಲ್ಲ. ಈ ಸೂತ್ರಗಳನ್ನು ಕನ್ನಡಿಸುವದೂ ಸುಲಭವಾಗಿ ದಕ್ಕುವ ಮಾತಲ್ಲ. ಒಂದು ಪಕ್ಷ ಕನ್ನಡಿಸಿದರೂ ಬರೀ ಅದರಿಂದ ಯಾರಿಗೂ ಏನೂ ಪ್ರಯೋಜನವಾಗುವ ಸಂಭವವೂ ಇಲ್ಲ. ಏಕೆಂದರೆ ಸಂಸ್ಕೃತದಲ್ಲಿ ಕೆಚ್ಚೆದೆಯ ಪಂಡಿತರಾದವರಿಗೆ ಕೂಡ ಅವು ಅಷ್ಟಗೋಡೆಯಂತಿರುವವು. ಇನ್ನು ಸಾಮಾನ್ಯರಿಗೆ ಅವು ಹೇಗೆ ತಿಳಿದಾವು? ಇವನ್ನು ನೋಡಿ ಜನಸಮುದಾಯದ ಮೇಲೆ ಕನಿಕರಗೊಂಡ ಶ್ರೀ ಶಂಕರಭಗವತ್ಪಾದರು

ಇವುಗಳ ಅರ್ಥವನ್ನು ಬೇಕಾದಷ್ಟು ವಿವರಿಸಿ ಭಾಷ್ಯವನ್ನು ಬರೆದು ತಮ್ಮ ಬುದ್ಧಿವೈಭವದ ಉಜ್ಜ್ವಲತೆಯಿಂದ ಹತ್ತು ದಿಕ್ಕುಗಳಿಗೂ ಇವುಗಳ ಬೆಳಕನ್ನು ಬೀರಿರುವರು. ಅದರ ಪರಿಚಯವಾದರಂತು ವೇದಾಂತಶಾಸ್ತ್ರವು ಅಂಗೈಯೊಳಗಣ ನೆಲ್ಲಿಯು ಕಾಯಂತಾಗುವದು. ಆದರೆ ಆ ಗ್ರಂಥವೂ ಬಹು ದೊಡ್ಡದು. ಅದರೊಳಗಣ ವಿಚಾರಸರಣಿಯೂ ಬಹಳ ಗಹನವಾದದ್ದು. ಹೀಗೆ ಅದು ಕನ್ನಡಿಗರ ಹೊಟ್ಟೆಯೊಳಗೆ ಒಗ್ಗಿಸಲಾರದ್ದಾದ್ದರಿಂದ ಅದಕ್ಕೆ ಕೈ ಹಾಕುವದಕ್ಕೆ ಮುಂಚೆ ಆ ಸೂತ್ರಗಳ ಸಾಮಾನ್ಯ ಪರಿಚಯವಾಗುವದಕ್ಕೆ ಸಾಕಾದಷ್ಟು ಒಂದು ಸಣ್ಣ ಗ್ರಂಥವು ಕನ್ನಡದಲ್ಲಿ ತಲೆದೋರಿದರೆ ಅನುಕೂಲವೆಂದು ಯೋಚಿಸುವಾಗ ಬ್ರಹ್ಮಸೂತ್ರಾರ್ಥಕಲ್ಪವಲ್ಲಿಯೆಂಬ ಒಂದು ಸಂಸ್ಕೃತವ್ಯಾಖ್ಯಾನವು ನನ್ನ ಕೈಗೆ ಬಂತು. ಅದು ಆ ಸೂತ್ರಗಳನ್ನು ಸ್ವಲ್ಪಮಟ್ಟಿಗೆ ಮಾತ್ರ ಹಿಗ್ಗಿಸಿ ಅದರೊಳಗಣ ವಿಶೇಷಗಳನ್ನು ಬಹು ಸರಳವಾಗಿ ಬಹು ಹಿತದಿಂದ ಬಹು ಚೆನ್ನಾಗಿ ಹೊರಗೆಡಹುವದು ನನಗೆ ಬಹು ಹೃದಯಂಗಮವೆನಿಸಿತು. ಅದ್ದರಿಂದ ನಾನು ಅದರ ಬಲದಿಂದ ಪೂರ್ವಪಕ್ಷಸಿದ್ಧಾಂತಗಳ ಒಂದು ಬಗೆಯ ಸಂವಾದರೂಪದಲ್ಲಿ ಈ ಗ್ರಂಥವನ್ನು ಬರೆದೆನು. ಪೂರ್ವಪಕ್ಷವೆಂದರೆ ಸಂಗತಿಯ ಒಳಹೊಕ್ಕು ಅತ್ತಿತ್ತ ನೋಡದೆ ಬರೀ ಹೊರಮೈನೋಟದಿಂದ ಎಲ್ಲರಿಗೂ ಸಾಮಾನ್ಯವಾಗಿ ಹೊಳೆಯುವ ಅಭಿಪ್ರಾಯ. ಇದು ಬಹುಮಟ್ಟಿಗೆ ನೆಟ್ಟಗೆ ನಿಲ್ಲಲಾರದೆ ತಟ್ಟಾಡುತ್ತಿರುವದು. ಸಿದ್ಧಾಂತವೆಂದರೆ ಹಿಂದುಮುಂದಿನ ಸಂದರ್ಭಗಳಿಗೆ ಹೊಂದಿಕೆಯಾಗಿ ವಿವೇಕಿಗಳಿಗೆ ಹೊಳೆಯುವ ಅಭಿಪ್ರಾಯ. ಇದು ನೆಲೆಗೆ ನಿಂತ ಮಾತು.

ಬ್ರಹ್ಮಸೂತ್ರಾರ್ಥಕಲ್ಪವಲ್ಲಿಯೆಂಬ ಸಂಸ್ಕೃತಗ್ರಂಥದಿಂದ ಎತ್ತಿಕೊಂಡಿರುವ ಈ ಗ್ರಂಥಕ್ಕೂ ಅದೇ ಹೆಸರನ್ನಿಡುವದನ್ನು ಬಿಟ್ಟು ಬೇರೆ ಹೆಸರೇಕೆಂದರೆ ಇದು ಅದರ ಪ್ರತ್ಯಕ್ಷರದ ಭಾಷಾಂತರವಲ್ಲ. ಹಾಗಿದ್ದರೆ ಮಾತ್ರ ಆ ಹೆಸರನ್ನಿಡಬಹುದಾಗಿತ್ತು. ಆ ಗ್ರಂಥವು ಅನೇಕ ಶ್ರುತಿಗಳನ್ನು ಉದಾಹರಿಸುತ್ತದೆ. ಸಾಕ್ಷಾತ್ತಾಗಿ ನಾನು ಆ ಶ್ರುತಿಗಳನ್ನು ಇದರಲ್ಲಿ ಬರೆದರೆ ಗ್ರಂಥವು ಬೆಳೆದು ಹೊರಲಾರದ ಹೊರೆಯಾಗುವದಿಷ್ಟೇ ಫಲವೇ ಹೊರತು ಸಂಸ್ಕೃತದ ಪರಿಚಯವಿಲ್ಲದ ಕನ್ನಡಿಗರಿಗೆ ಅದರಿಂದ ಹೆಚ್ಚಿನ ಲಾಭವೇನೂ ಕಾಣಲಿಲ್ಲ. ಉಪನಿಷದ್ವಾಕ್ಯಗಳ ಅರ್ಥವನ್ನು ನಿರ್ಣಯಿಸುವ ಈ ಗ್ರಂಥದಲ್ಲಿ ಉಪನಿಷದ್ವಾಕ್ಯಗಳಿರುವದು ಭೂಷಣವೆಂಬ ಮಾತಿಗೆರಡಿಲ್ಲ. ಆದರೆ ಸಂಸ್ಕೃತದಲ್ಲಿ ವೇದಾಂತಗ್ರಂಥಗಳ ಪರಿಚಯವನ್ನು ಮಾಡಿಕೊಳ್ಳುವವರಲ್ಲಿ ಕೂಡ ಅನೇಕರು ಉಪನಿಷದ್ವಾಕ್ಯಗಳ ಹಿಂದುಮುಂದಿನ ಸಂದರ್ಭಗಳನ್ನರಿತಿರುವದಿಲ್ಲ. ಹೀಗಿರುವಾಗ ಕನ್ನಡಿಗರ ಮಾತನ್ನೇನು? ಈ ಕಾರಣದಿಂದ ಇದರಲ್ಲಿ ಯಾವ ಸಂದರ್ಭದಲ್ಲಿಯೂ ಶ್ರುತಿಯನ್ನು ಉದಾಹರಿಸಿಲ್ಲ. ಆದರೂ ಅದರ ತಾತ್ಪರ್ಯವನ್ನು ತಿಳಿಸುವದನ್ನು ಮಾತ್ರ ಎಲ್ಲಿಯೂ ಬಿಟ್ಟಿಲ್ಲ.

ಇವರ ಮೇಲೆ ಆನಂದಮಯದ ಪುಚ್ಛವಾದ ಬ್ರಹ್ಮದ ವಿಚಾರವನ್ನು ಹೇಳುವಾಗಲೂ ಮೂರನೆ ಅಧ್ಯಾಯದ ಮೂರನೆ ಪಾದವನ್ನು ಬರೆಯುವಾಗಲೂ ನಾನು ಕಲ್ಪವಲ್ಲಿಯ ದಾರಿಯನ್ನು ಒಂದಿಷ್ಟು ಪಕ್ಕಕ್ಕೆ ಒತ್ತಿ ಶ್ರೀ ಶಂಕರಭಗವತ್ಪಾದರ ಅಭಿಪ್ರಾಯಕ್ಕೆ ಅನುಗುಣವಾದ ಅರ್ಥವನ್ನು ಸೇರಿಸಿದ್ದೇನೆ. ಇನ್ನು ಕೆಲವು ಕಡೆಗಳಲ್ಲಿಯೂ ಸಿದ್ಧಾಂತಕ್ಕೆ ವಿರುದ್ಧವಾಗಿ ಕಂಡ ಅಭಿಪ್ರಾಯಗಳನ್ನು ತಿದ್ದಿಕೊಂಡು ಸಿದ್ಧಾಂತಕ್ಕೆ ವಿರುದ್ಧವಲ್ಲದ ಅಭಿಪ್ರಾಯಕ್ಕೆ ಆಚಾರ್ಯರ ದಾರಿಗಿಂತ ಬೇರೆಯಾಗಿದ್ದರೂ ಅಲ್ಲಲ್ಲಿ ಹಾಗೆಯೇ ಇಟ್ಟಿದ್ದೇನೆ ಹೀಗೆಲ್ಲ ಇರುವದರಿಂದ ಇದಕ್ಕೆ ನಾನು ಬೇರೆ ಹೆಸರನ್ನಿಟ್ಟಿದ್ದೇನೆ.

ಇದರಲ್ಲಿ ಅಧ್ಯಾಯದ ವಿಷಯ, ಪಾದದ ವಿಷಯ–ಇವುಗಳನ್ನೆಲ್ಲ ತೋರಿಸಿರುವೆನಲ್ಲದೆ ವಿಚಾರ (ಅಧಿಕರಣ)ದ ವಿಷಯಗಳನ್ನು ತೋರಿಸುವಾಗ ಸಂಸ್ಕೃತದ ಪದ್ಧತಿಯನ್ನು ಹಿಂಬಾಲಿಸುವದು ಕನ್ನಡಕ್ಕೆ ಹೊಂದದ ಮಾತಾಗಿ ಕಂಡದ್ದರಿಂದ ಕನ್ನಡಿಗರ ಅಭಿರುಚಿಯನ್ನು ಗುರಿಯಲ್ಲಿಟ್ಟುಕೊಂಡು ವಿಚಾರದ ವಿಷಯವನ್ನು ಸಂಕ್ಷೇಪವಾಗಿ ಬರೆದಿರುತ್ತೇನೆ. ವಿಚಾರದ ವಿಷಯದ ಹೆಸರಿನ ಹಿಂದೆ ಅದರ ಕ್ರಮಸಂಖ್ಯೆಯನ್ನೂ ಆ ಹೆಸರಿನ ಮುಂದೆ ಕಂಸದಲ್ಲಿ ಆ ವಿಚಾರಕ್ಕೆ ಸಂಬಂಧಪಟ್ಟ ಸೂತ್ರರಾಶಿಯ ಸಂಖ್ಯೆಯನ್ನೂ ಕೊಟ್ಟಿರುತ್ತೇನೆ. ಒಂದೊಂದು ಸೂತ್ರದ ಸಂಗತಿ ಮುಗಿಯುತ್ತಲೆ ಅದಕ್ಕೆ ಕೊನೆಯಲ್ಲಿ ಅದರ ಮೂಲವಾದ ಸೂತ್ರದ ಸಂಖ್ಯೆಯನ್ನು ಕೊಟ್ಟಿದ್ದೇನೆ. ಪೂರ್ವಪಕ್ಷದ ಅಭಿಪ್ರಾಯಗಳೂ ಸೂತ್ರವಲ್ಲಿ ಅಡಕವಾದವುಗಳೇ ಆಗಿದ್ದರೆ ಅದರ ಕೊನೆಯಲ್ಲಿ ಆ ಸೂತ್ರದ ಸಂಖ್ಯೆಯನ್ನು ಕೊಟ್ಟಿದ್ದೇನೆ. ಈ ಸೂತ್ರಸಂಖ್ಯೆಗಳ ಸಹಾಯದಿಂದ ವಿಚಾರಕರು ಬೇಕಾದರೆ ಮೂಲಸೂತ್ರಗಳನ್ನು ನೋಡಿಕೊಳ್ಳಲೆಂದೂ ಮತ್ತು ಶ್ರದ್ಧಾಳುಗಳಿಗೆ ಪಾರಾಯಣಕ್ಕೆ ಅನುಕೂಲವಾಗಲೆಂದೂ ಆ ಸೂತ್ರಗಳನ್ನೆಲ್ಲ ಒಂದೇ ಕಡೆ ಈ ಗ್ರಂಥದ ಕೊನೆಯಲ್ಲಿ ಕೊಟ್ಟಿದ್ದೇನೆ. ಒಂದೊಂದು ಕಡೆ ಸೂತ್ರಗಳಲ್ಲಿ ಅಡಕವಾಗಿರದ ಪೂರ್ವಪಕ್ಷಗಳನ್ನು ವಾಚಕರ ಸೌಕರ್ಯಕ್ಕಾಗಿ ಬರೆದು ಅದರ ಕೊನೆಯಲ್ಲಿ ಯಾವ ಸಂಖ್ಯೆಯನ್ನೂ ಹಾಕದೆ ಬಿಟ್ಟಿರುತ್ತೇನೆ. ಪೂರ್ವಪಕ್ಷವೆಂದು ಬರೆದಿರುವ ಕೆಲವು ಕಡೆಗಳಲ್ಲಿ ಯಾವ ಪಕ್ಷವೂ ಇಲ್ಲದಿದ್ದರೂ ಬರೀ ಸಂಶಯಪರಿಹಾರಕ್ಕಾಗಿ ಮಾಡಿದ ಪ್ರಶ್ನೆಗಳೂ ಅಡಕವಾಗಿವೆ.

ಶಾಸ್ತ್ರಗಳೆಲ್ಲ ಸಂಸ್ಕೃತದಲ್ಲಿವೆ. ಇದು ಶಾಸ್ತ್ರಪರಿಚಯವಿಲ್ಲದ ಕನ್ನಡಿಗರಿಗಾಗಿ ಹುಟ್ಟಿರುವ ಗ್ರಂಥ. ಆದ್ದರಿಂದ ಇದರಲ್ಲಿ ಶಾಸ್ತ್ರಮರ್ಯಾದೆಗಳಿಗೆಲ್ಲಿಯಾದರೂ ಲೋಪವು ಕಂಡುಬಂದರೆ ಅದನ್ನು ದಯವಿಟ್ಟು ಉಪೇಕ್ಷೆಮಾಡಬೇಕು. ಸಣ್ಣ ಊರುಗಳಲ್ಲಿರುವವರು ಒಬ್ಬರಿಗೊಬ್ಬರು ಪ್ರೇಮದ ಭರದಿಂದ ಹೇಗೋ ಹಾಗೆ ಸರಳವಾಗಿ ಮಾತುಕತೆಗಳನ್ನು ನಡೆಸಬಲ್ಲರೆ ಹೊರತು ರಾಜಾಸ್ಥಾನದ ಸಂಪ್ರದಾಯದ ಬೆಡಗು

ಗಳಲ್ಲಿ ಪಳಗಿದವರಾಗಿರುವದಿಲ್ಲ. ಸಂಸ್ಕೃತವು ಬ್ರಹ್ಮದ ರಾಜಧಾನಿ. ಕನ್ನಡವು ಅದರ ಅಂಕೆಯೊಳಗಿರುವ ಸಣ್ಣ ಊರು. ಆದ್ದರಿಂದ ಕನ್ನಡಿಗರಲ್ಲಿ ರಾಜಧಾನಿಯ ಸಂಪ್ರದಾಯದ ಓರೆಕೋರೆಗಳ ಬಿಕ್ಕಟ್ಟು ಅಷ್ಟು ಚೆನ್ನಾಗಿ ಮೈಗೂಡುವದಿಲ್ಲ. ಶಾಸ್ತ್ರೀಯವಾದ ಮಾತುಗಳ ಗದ್ದಲವಿಲ್ಲದ ಈ ಗ್ರಂಥವು ಬ್ರಹ್ಮಸೂತ್ರಗಳ ಬಹು ಬೆಲೆಯುಳ್ಳ ಅಭಿಪ್ರಾಯಗಳನ್ನು ತಿಳಿಯಾದ ನುಡಿಯಲ್ಲಿಟ್ಟಿರುವದು. ವೇದಾಂತ ಶಾಸ್ತ್ರದಿಂದ ಆರಿಸಿದ ಮುಖ್ಯಮುಖ್ಯ ವಿಚಾರಗಳೆಲ್ಲ ಇದರ ಹಾಸುಹೊಕ್ಕುಗಳಾಗಿರುವದರಿಂದ ವೇದಾಂತಪ್ರಿಯರಿಗೆ ಇದು ಬಹು ಅಗತ್ಯವಾದದ್ದಾಗಿರುವದು. ಬ್ರಹ್ಮಸೂತ್ರಗಳ ವಿಚಾರವು ಕನ್ನಡದ ರಂಗಮಂಟಪಕ್ಕೆ ಕಾಲಿಡುವದಕ್ಕೆ ಇದೇ ಮೊದಲು. ಆದ್ದರಿಂದ ಕನ್ನಡಿಗರು ಇದರ ಅಂದಚಂದಗಳನ್ನು ಬಹು ಕುತೂಹಲದಿಂದ ನೋಡುವದಕ್ಕೆ ದೃಷ್ಟಿಯನ್ನು ಹರಿಸಬೇಕು. ಮೊರೆಯ ತನಕ ದೂರೆಂಬದೊಂದು ಗಾದೆಯುಂಟಷ್ಟೆ. ವೇದಾಂತಕ್ಕೆ ಚಕ್ರವರ್ತಿಯಾಗಿರುವ ಬ್ರಹ್ಮಸೂತ್ರಗಳಿಂದ ತನ್ನ ತಿಳಿವಳಿಕೆಯನ್ನು ಅಳವಡಿಸಿಕೊಂಡ ಮೇಲೆ ಆತ್ಮವಿಚಾರದ ತಿಳಿವಿಗಾಗಿ ಇನ್ನೊಂದು ಕಡೆ ತಡಕಬೇಕಾದದ್ದಿರುವದಿಲ್ಲ.

ಈ ಗ್ರಂಥದ ಅರ್ಥವು ಮನಸ್ಸಿಗೆ ಚೆನ್ನಾಗಿ ಅಳವಡಬೇಕಾದರೆ ವೇದವಾಕ್ಯಗಳೆಲ್ಲ ಬಾಯಿಗೆ ನುರಿದಿರುವದು ಅಗತ್ಯವೇ ಸರಿ. ಅದರಲ್ಲಿಯೂ ಮೊದಲನೆಯ ಅಧ್ಯಾಯದಲ್ಲಿ ಅದರ ಅವಶ್ಯಕತೆ ಹೆಚ್ಚಾಗಿಯೇ ಕಾಣುತ್ತದೆ. ಆದರೂ ಮುಂದೆಲ್ಲ ವಾಕ್ಯಗಳು ಗೊತ್ತಿಲ್ಲದೆಯೂ ವಿಷಯಗಳ ಅರ್ಥವಾಗಬಹುದಾಗಿ ತೋರಿದ್ದರಿಂದ ಇದರ ಸೊಗಸನ್ನು ಕಷ್ಟಪಟ್ಟಾದರೂ ಕನ್ನಡಿಗರಿಗೆ ಬೀರಬೇಕೆಂದು ಪೂರ್ಣಗ್ರಂಥವನ್ನು ಇದರಲ್ಲಿಳಿಸಿದ್ದೇನೆ. ಗ್ರಂಥಾರಂಭದಲ್ಲಿ ವಾಚಕರು ಶ್ರೇಯಃಪ್ರಾರ್ಥನೆಯನ್ನು ಮಾಡಿಕೊಳ್ಳುವ ಸಂಪ್ರದಾಯಕ್ಕೆ ಸಾಧನವಾಗಿ ಉಪನಿಷತ್ತುಗಳಲ್ಲಿ ಪ್ರಸಿದ್ಧವಾಗಿರುವ ಹತ್ತು ಶಾಂತಿಪಾಠಗಳನ್ನು ಕನ್ನಡದಲ್ಲಿ ಭಟ್ಟಿ ಇಳಿಸಿ ಇದರ ಮುಂದೆ ಜೋಡಿಸಿದ್ದೇನೆ. ಈ ಗ್ರಂಥವು ಓದುವವರ ಮನಸ್ಸಿನ ಮೇಲೆ ಪರಿಣಾಮಕಾರಿಯಾದರೆ ಆಗ ನನ್ನ ಶ್ರಮ ಸಾರ್ಥಕವಾಯಿತೆಂದು ತಿಳಿಯುತ್ತೇನೆ.

ಬ್ರಹ್ಮಾಶ್ವತ್ಥ
ಧಾತೃ—ಮಾರ್ಗಶಿರ

ಹೊಸಕೆರೆ ಚಿದಂಬರಯ್ಯ



# ಬ್ರಹ್ಮಕ್ಕೆ ಶರಣು

(ಕಂ) ವರುಣಂ, ಮಿತ್ರನುಮಿಂದ್ರಂ, ।
ಗುರುವುಂ, ಪಾವುನನುಮೆಮಗೆ ನಲಿಸಿಯ.ಲಿ; ನಾ ॥
ನೆರಗುವೆ ವಾಯುವೆ, ನೀನೇ ।
ನೆರೆ ಬ್ರಹ್ಮಂ; ನಿಜದಿ ಪೊರೆವುದೆನ್ನಂ ಗುರುವಂ ॥ ೧ ॥

(ಕಂ) ಪೊರೆ ಗುರುಶಿಷ್ಯರನೆಮ್ಮಂ। ಪಿರಿದುಣಿಸಿಂ ಜೊತೆಯೊಳೀರ್ವರುಂ ವರ್ಧಿಪವೊಲ್ ॥
ನೆರೆ ಕಲಿತುದು ಕಳೆಗಟ್ಟಲಿ;। ಬರದಿರಲೆಮ್ಮೊಳಗೆ ಹಗೆತನದ ಸುಳಿವೊಂದುಂ॥ ೨ ॥

(ವೃ) ಬಲವಾಗಲ್ಪ್ರಾಜ್ಞೆ; ನಾವಂ ತೃಣಕೆ ಸಮವೆನಲ್ಬ್ರಹ್ಮದಾ ಜ್ಞಾನಮೆಮ್ಮೊಳ್ ।
ನೆಲೆಸಲ್ತಕ್ಕಂತೆ ದೇಹಂ ಸುಖಮಿರೆ; ಸವಿಮಾತ ಪೇಳ್ತಾಂ ಜಿಹ್ವೆ; ಮತ್ತಂ ॥
ಬಲು ಕೇಳುತ್ತಿರ್ಪವೊಲ್ ಶ್ರೋತ್ರದಿ; ಮರುಳರಿಗಪ್ರಾಪ್ಯನಾಗಿರ್ಪನೀ, ನೀಂ ।
ಸಲಹೈ ವೇದಾಬ್ಧಿಯೊಳ್ತೇಲುವ ಪ್ರಣವದ ರೂಪಿಂದೆ ತಾನಿರ್ಪ ಬ್ರಹ್ಮ ॥ ೩ ॥

(ಕಂ) ಪ್ರೇರಕನಾಂ ಸಂಸಾರಕ । ಪಾರಂ ತಾನೆನ್ನ ಕೀರ್ತಿ; ರವಿಯೊಳಮೃತವುಂ ॥
ಬೀರುತಿಹಾತ್ಮಂ, ತಾನೆಂ। ದಾರಯ್ದುಸಿರ್ದಂ ತ್ರಿಶಂಕುವನುಭವಬಲದಿಂ ॥ ೪ ॥

(ವೃ) ಶ್ರೋತ್ರಮಿದಾವಗಂ ಶ್ರುತಿಯ ಕೇಳುವದಾಗಲಿ; ಕಣ್ಗಳೈದೆ ಸು ।
ಪ್ರೀತಿಯೊಳೀಕ್ಷೆಗೈಗೆ ಕ್ರತುವರ್ಗವನಾಯುವು ನಿನ್ನ ಕೀರ್ತನ ॥
ವ್ರಾತದಿ ಪೂರ್ಣವಾಗಿರಲಿ; ಶಕ್ರನ, ಪೂಷನ, ಮತ್ತೆ ತಾರ್ಕ್ಷ್ಯನಾ ।
ಸಾತಿಶಯತ್ವದಾ ಗುರುವಿನಾ ಒಲವೆಮ್ಮೊಳಗಿರ್ಕೆ ಸಂತತಂ ॥ ೫ ॥

(ಕಂ) ಪೂರ್ಣಂ ಬ್ರಹ್ಮಂ; ಜೀವಂ। ಪೂರ್ಣಂ; ಪೂರ್ಣದಲಿ ಪೂರ್ಣಮುದ್ಭವಿರುತಿರ್ಕುಂ; ॥
ಪೂರ್ಣದಿ ಪೂರ್ಣವಕಳೆಯಲ್। ಪೂರ್ಣತೆಯುಂ ಬಿಡದ ಬ್ರಹ್ಮಕಭಿನಮಿಸಿದಪೆಂ॥

(ಕಂ) ತನುಮನಗಳೆನಗೆ ಹಿತವನೆ । ನೆನೆಯಲಿ; ಬ್ರಹ್ಮದೊಳುಪೇಕ್ಷೆಬರದಿರಲದುಮೆ ॥
ನ್ನನುಪೇಕ್ಷೆಮಾಡದಿರಲಾ । ಅನುಭವಿಗಳ ಧರ್ಮಮೆಮ್ಮೊಳಳವಡುತಿರಲಿ ॥ ೭ ॥

(ವೃ) ಮನವಲ್ಲಿದ್ದುದನಾಡಲೆನ್ನ ನುಡಿಗಳ್ಮೇಣ್ಬ್ರಹ್ಮದೊಳ್ನೆಟ್ಟಿರಲ್ ।
ಮನಮುಂ; ಬ್ರಹ್ಮವೆ ಕಾಣುತಿರ್ಕೆನಗೆ; ಗ್ರಂಥಜ್ಞಾನಮುಂ ಬಾಡದಂ ॥
ತಿನಿತುಂ ಶಾಸ್ತ್ರದೊಳೋದು ಸಾಗುತಿರೆ; ವೇದಾಂತೈಕನಿಷ್ಠಾತ್ಮನಾ ।
ದೆನಗಾ ಜ್ಞಾನವನೀವ ಸದ್ಗುರುವನುಂ ಕಾಪಾಡಲಾ ಬ್ರಹ್ಮ ತಾಂ ॥ ೮ ॥

(ಕಂ) ಹೇ ದೇವ, ಎನ್ನ ಚಿತ್ತಂ । ಸಾದರದಿಂದೊಳಿತನರಸಿ ಪೋಗುವ ತೆರದಿಂ ॥
ನೀಂ ದಯೆಗೈದೆನ್ನನು ಪೊರೆ; । ವೇದಾತ್ಮನೆ, ಬೇಡೆನನ್ಯಮಾದುದ ನಿನ್ನಿಂ ॥ ೯ ॥

(ಕಂ) ಆವನಿನಪರಬ್ರಹ್ಮನೊ, । ಆವನಿನವನೊಳಗೆ ಹೊಳೆದುದೋ ವೇದಾರ್ಥಂ ॥
**ಆವಂ ಬುದ್ಧಿಗೆ ತಾ ಬೆಳ । ಕೀವವನಾಗಿಹನೊ ಅವಗೆ ನಾ ಶರಣೆಂಬೆಂ ॥** ॥ ೧೦ ॥

---

# ವಿಷಯಸೂಚಿಕೆ

ವಿಷಯ ಪುಟಸಂಖ್ಯೆ

ವಿಷಯ ಪುಟಸಂಖ್ಯೆ

ವಿಷಯ ಪುಟಸಂಖ್ಯೆ

ವಿಷಯ — ಪುಟಸಂಖ್ಯೆ

ವಿಷಯ ಪುಟಸಂಖ್ಯೆ

ವಿಷಯ ಪುಟಸಂಖ್ಯೆ

ಒಟ್ಟು ವಿಷಯಗಳ ಸಂಖ್ಯೆ ೧೯೧; ಒಟ್ಟು ಸೂತ್ರಗಳ ಸಂಖ್ಯೆ ೫೫೫.

# ಈ ಗ್ರಂಥಕರ್ತರ ವೇದಾಂತಗ್ರಂಥಗಳಲ್ಲಿ ಚಿಕ್ಕವು

---

## ವೇದಾಂತದ ರೂಪರೇಖೆ

ಜೀವ, ಈಶ್ವರ, ಜಗತ್ತು—ಈ ಮೂರರ ಬಣ್ಣವನ್ನು ಚೆನ್ನಾಗಿ ಒರೆಹಚ್ಚಿ ನೋಡುವದಕ್ಕೆ ಇದು ಬಹು ಒಳ್ಳೆ ಒರೆಗಲ್ಲು. ಎರಡನೆಯದೊಂದುಂಟೆಂಬ ಭಾವನೆಯನ್ನು ಎಲ್ಲ ಕಡೆಯಿಂದಲೂ ಹಾರಿಸುವ ವಿಷಯದಲ್ಲಿ ಇದು ಬಲವಾದ ಸುಂಟರುಗಾಳಿ. ಅನುಭವಕ್ಕೆ ಹೊಂದುವ ಯುಕ್ತಿಗಳ ಸುರಿಮಳೆಯಿಂದ ಇದು ನರನನ್ನು ನಾರಾಯಣನನ್ನಾಗಿ ಮಾಡುವದು..... .... .... ಬೆಲೆ. ೦—೪—೦.

## ಮತ್ತು

## ಉಪನಿಷತ್ತುಗಳುಉಪದೇಶ

ಸ್ವಲ್ಪ ಓದಿ ಬಹಳ ತಿಳಿದುಕೊಳ್ಳುವಂತೆ ಉಪನಿಷತ್ತುಗಳ ಅಭಿಪ್ರಾಯವೆಲ್ಲ ಮಾತುಗಾರಿಕೆಯ ರೂಪದಲ್ಲಿದ್ದು ವೇದಾಂತಜ್ಞಾನವನ್ನು ಗಟ್ಟಿಯಾದ ತಳಹದಿಯ ಮೇಲೆ ನಿಲ್ಲಿಸುವದು. ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದೆಂಬಂತೆ ಇದು ಜ್ಞಾನಪುಷ್ಟಿಗೆ ಎಣೆ ಇಲ್ಲದ್ದಾಗಿದೆ. ಈಶ ಮತ್ತು ಕೇನ ಎಂಬೆರಡು ಚಿಕ್ಕ ಉಪನಿಷತ್ತುಗಳ ಅಭಿಪ್ರಾಯವಿರುವ ೧ನೇ ಭಾಗಕ್ಕೆ .... ಬೆಲೆ. ೦—೨—೦.

ಶ್ರೀಗುರುಭ್ಯೋ ನಮಃ

# ಬ್ರಹ್ಮಸೂತ್ರಗಳ ಬೆಳಕು

---

## ಅಧ್ಯಾಯ ೧

ಉಪನಿಷದ್ವಾಕ್ಯಗಳೆಲ್ಲ ಬ್ರಹ್ಮವನ್ನೇ ಹೇಳುವವೆಂದು ತೋರಿಸುವದು

## ಪಾದ ೧

ಬ್ರಹ್ಮವನ್ನು ಗುರ್ತಿಸುವ ಸ್ಪಷ್ಟವಾದ ಮಾತುಗಳುಳ್ಳ ವಾಕ್ಯಗಳ ವಿಚಾರ

---

೧ ಬ್ರಹ್ಮವಿಚಾರವನ್ನು ಮಾಡಬೇಕು (೧)

ಸಿದ್ಧಾಂತಿ— ತನ್ನನ್ನೂ ತಾನಲ್ಲದ್ದನ್ನೂ ಬಿಡಿಸಿ ತಿಳಿಯುವದು, ಇಂದ್ರಿಯಗಳನ್ನೂ ಮನಸ್ಸನ್ನೂ ಬಿಗಿಹಿಡಿಯುವದು, ಈ ಲೋಕದ ಮತ್ತು ಪರಲೋಕದ ಸುಖಗಳನ್ನು ಬಯಸದಿರುವದು, ಹುಟ್ಟುಸಾವುಗಳನ್ನು ತಪ್ಪಿಸಿಕೊಳ್ಳಬೇಕೆಂಬ ಆಸೆ – ಈ ನಾಲ್ಕು ಬಗೆಯ ಸಾಧನಗಳು ಮೈಗೂಡಿದ ಮೇಲೆ ಬ್ರಹ್ಮವಿಚಾರವನ್ನು ಮಾಡುವದಕ್ಕೆ ಯೋಗ್ಯತೆಯುಂಟಾಗುವದರಿಂದ ಆಗ ಅದರ ವಿಚಾರವನ್ನು ಮಾಡಬೇಕು. ಬರೀ ವೈದಿಕಕರ್ಮಗಳ ಫಲಗಳು ಮೂರು ದಿನದ ಬಾಳಿನವುಗಳಾದ್ದರಿಂದ ವಿವೇಕಿಯು ಶಾಶ್ವತವಾದ ಬ್ರಹ್ಮಾನಂದವನ್ನು ಬಯಸಬೇಕು. ಬ್ರಹ್ಮವು ತಮ್ಮ ಆತ್ಮವೇ ಆದರೂ ಅದರ ಗುಟ್ಟು ಯಾರಿಗೂ ತಿಳಿದಿರುವದಿಲ್ಲ. ಆದ್ದರಿಂದ ಬ್ರಹ್ಮದ ವಿಚಾರವು ಅಗತ್ಯ. —೧

೨ ಅದು ಜಗತ್ತಿನ ತಾಯಿಬೇರು (೨)

,, ಈ ಜಗತ್ತಿನ ಹುಟ್ಟುವಿಕೆ, ಇರುವಿಕೆ, ಹೋಗುವಿಕೆ – ಇವುಗಳಿಗೆಲ್ಲ ಕಾರಣವಾದದ್ದು ಬ್ರಹ್ಮ. ಅನೇಕ ಹೆಸರುಗಳಿಂದಲೂ ಆಕಾರ

ಗಳಿಂದಲೂ ಜೀವರಿಂದಲೂ ಕೂಡಿ ಒಂದು ನಿಯಮಕ್ಕೊಳಪಟ್ಟು ನಡೆಯುತ್ತ ಊಹೆಗೆ ಕೂಡ ನಿಲುಕದಂಥ ವೈಕಟ್ಟುಳ್ಳ ಜಗತ್ತು ಬ್ರಹ್ಮದ ಹೊರತು ಬೇರೊಂದರಿಂದ ಏರ್ಪಡಲಾರದು. —೨

೩ ಅದು ಶಾಸ್ತ್ರಗಳಿಂದ ಮಾತ್ರವೇ ತಿಳಿಯಬರುವದು (೩)

,, ಸರ್ವಜ್ಞವಾದ ಆ ಬ್ರಹ್ಮದಿಂದ ಪುರುಷರ ನಿಃಶ್ವಾಸದಂತೆ ಪ್ರಯತ್ನವಿಲ್ಲದೆ ತಾನಾಗಿ ಹೊರಬಿದ್ದಿರುವ ಉಪನಿಷತ್ತುಗಳೆಂಬ ಶಾಸ್ತ್ರಗಳೇ ಇದಕ್ಕೆ ಪ್ರಮಾಣವು. ಆ ವಿಷಯವನ್ನು ಅನೇಕ ಯುಕ್ತಿಗಳಿಂದ ಪರಿಪುಷ್ಟಿಗೊಳಿಸಿ ಅನುಭವದ ಬೆಂಬಲವನ್ನು ನೆನಪುಗೊಟ್ಟು ಅವು ಹೇಳಿರುವವು. —೩

೪ ಉಪನಿಷತ್ತುಗಳೆಲ್ಲ ಬ್ರಹ್ಮವನ್ನೆ ಹೇಳುತ್ತವೆ (೪)

,, ಉಪನಿಷತ್ತುಗಳ ಮೊದಲನ್ನೂ ಕೊನೆಯನ್ನೂ ಮನಸ್ಸಿಗೆ ತಂದುಕೊಂಡು ನೋಡಿದರೆ ಅವೆಲ್ಲ ಬ್ರಹ್ಮವನ್ನೆ ಹೇಳುವದಕ್ಕೆ ಹೊರಟವುಗಳೆಂದು ಗೊತ್ತಾಗುತ್ತದೆ. ಶಾಸ್ತ್ರದ ಬೆಂಬಲವಿಲ್ಲದೆ ಬರೀ ಊಹೆಯಿಂದ ಅದನ್ನು ತಿಳಿಯಲಾಗುವದಿಲ್ಲ. ಅದು ಇಂದ್ರಿಯಗಳಿಗೆ ಕಾಣಬರುವದಂತು ಅಲ್ಲವೇ ಅಲ್ಲ. ಆದ್ದರಿಂದ ಅದಕ್ಕೆ ಶಾಸ್ತ್ರವೇ ಪ್ರಮಾಣ. —೪

**ಪೂರ್ವಪಕ್ಷಿ**— ಉಪನಿಷತ್ತುಗಳು ಬ್ರಹ್ಮವನ್ನೆ ಹೇಳುವವೆಂದು ಹೇಗೆ ಹೇಳುತ್ತೀರಿ? ಅವು ಸತ್ತ್ವರಜಸ್ತಮೋಗುಣಗಳು ಸಮವಾಗಿ ಸೇರಿರುವ ಪ್ರಧಾನವನ್ನು ಹೇಳುವವೆಂದೇಕೆ ಆಗಬಾರದು?

೫ ಯೋಚಿಸಿದ್ದು ಬ್ರಹ್ಮವಲ್ಲದೆ ಬೇರೆಯಲ್ಲ (೫ . . ೧೧)

**ಸಿ**— ಅದು ಆಗಲಾರದು. ಏಕೆಂದರೆ ಜಗತ್ತನ್ನು ಹೊರಗೆಡಹುವಾಗ ಅದು ತನ್ನಲ್ಲಿ ತಾನು "ಯೋಚಿಸಿತೆಂಬ ಮಾತಿದೆ. ಪ್ರಧಾನವು ಜಡ. ಆದ್ದರಿಂದ ಅದು ತನ್ನಲ್ಲಿ ತಾನು ಯೋಚಿಸಲಾಗಲಾರದು. —೫

**ಪೂ**— ಜಡವಾದ ನೀರೂ ಅಗ್ನಿಯೂ ತಮ್ಮಲ್ಲಿ ತಾವು ಯೋಚಿಸಿದವೆಂದು ವೇದದಲ್ಲಿ ಹೇಳಿದೆ. ಜಡವಾದ ಅವು ಯೋಚಿಸಿದವೆನ್ನುವದು ಗೌಣ. ದರಂತೆ ಪ್ರಧಾನದ ಯೋಚನೆಯೂ ಗೌಣವೇ ಆಗಲಿ. —೬

ಸಿ— ಹಾಗಾಗುವದಿಲ್ಲ. ಜಗತ್ತಿಗೆ ಕಾರಣವಾದ ಆ ವಸ್ತು ಆತ್ಮವೆಂಬ ಮಾತಿವೆ ಅವರ ಯೋಚನೆಯು ಮುಖ್ಯವಾದದ್ದಾಗಬೇಕೇ ಹೊರತು ಗೌಣವಾಗಲಾರದು. —೬

,, ಜಗತ್ತಿಗೆ ಕಾರಣವು ಬ್ರಹ್ಮವೇ ಎಂಬವಕ್ಕೆ ಬೇರೆ ಕಾರಣವೂ ಇದೆ. ನೋಡಿ. ಜಗತ್ತಿಗೆ ಕಾರಣವಾದ ಅದನ್ನು ಧ್ಯಾನಿಸುವವನಿಗೆ ಮೋಕ್ಷವಾಗುವದೆಂದು ಹೇಳಿದೆ. ಜಡವಾದ ಪ್ರಧಾನವನ್ನು ಧ್ಯಾನಿಸಿದವನಿಗೆ ಮೋಕ್ಷವಾಗುವ ಸಂಭವವಿಲ್ಲ. —೭

,, ಇನ್ನೊಂದೇನೆಂದರೆ: ಜಗತ್ತನ್ನು ಹೊರಗೆಡಹಿದ್ದು ನಿನ್ನ ಆತ್ಮವೆಂದು ಶ್ವೇತಕೇತುವೆಂಬ ಚೇತನನಿಗೆ ಉಪದೇಶವಾಗಿದೆ. ಅದು ಪ್ರಧಾನವಾಗಿದ್ದರೆ ಅವನು ಅವನ್ನೆ ಹಿಡಿದುಕೊಳ್ಳದೆ ಇರಲೆಂದು ಮುಂದೆ ಅವನಿಗೆ ಅವನ ನಿಜಸ್ವರೂಪವನ್ನು ತಿಳಿಸುವದರ ಮೂಲಕ ಅದನ್ನು ಬಿಡಬೇಕಾಗಿತ್ತು. ಆ ಮಾತೆಲ್ಲಿಯೂ ಬಂದಿಲ್ಲ. ಇದಲ್ಲದೆ ಪ್ರಧಾನವನ್ನು ಧ್ಯಾನಿಸುವದರಿಂದ ಮೋಕ್ಷವೆಂದು ಪ್ರಧಾನವಾದಿಗಳೂ ಹೇಳಿಲ್ಲ. ಆದ್ದರಿಂದ ಈ ಸಂದರ್ಭದಲ್ಲಿ ಪ್ರಧಾನಕ್ಕೆ ಅವಕಾಶವಿಲ್ಲ. —೮

,, ಮತ್ತೊಂದೇನೆಂದರೆ: ಗಾಢನಿದ್ರೆಯಲ್ಲಿ ಎಲ್ಲ ಜೀವರೂ ಆ ಜಗತ್ಕಾರಣದಲ್ಲಿ ಸೇರಿಹೋಗುವರೆಂದಿದೆ. ಈ ಚೇತನರ ಸೇರುವಿಕೆಯು ಜಡವಾದ ಪ್ರಧಾನದಲ್ಲಿ ಸಂಭವಿಸಲಾರದು. —೯

,, ಮಗದೊಂದೇನೆಂದರೆ: ಎಲ್ಲ ಉಪನಿಷತ್ತುಗಳೂ ಬ್ರಹ್ಮದಲ್ಲಿಯೇ ತಾತ್ಪರ್ಯ ಉಳ್ಳವುಗಳಾಗಿವೆ. —೧೦

,, ಇದರ ಮೇಲೆ ಜಗತ್ಕಾರಣವಾದ ವಸ್ತು ಎಲ್ಲವನ್ನೂ ಬಲ್ಲದ್ದೆಂದು ಹೇಳಿದೆ. ಜಡವಾದ ಪ್ರಧಾನಕ್ಕಾಗಲಿ, ಇನ್ನೊಂದಕ್ಕಾಗಲಿ, ಆ ಮಾತು ಸಲ್ಲುವದಿಲ್ಲ. —೧೧

೬ ಬ್ರಹ್ಮವನ್ನು ಪುಚ್ಛವೆಂದಿದ್ದರೂ ಮುಖ್ಯವೆ (೧೨ . . ೧೯)

ಪೂ— ವಿಜ್ಞಾನಾತ್ಮನಿಗಿಂತ ಒಳಗೆ ಇರುವ ಆನಂದಮಯನನ್ನು ಹೇಳುವಾಗ ಶ್ರುತಿಯು ಬ್ರಹ್ಮವನ್ನು ಆನಂದಮಯನ ಪುಚ್ಛವಾಗಿ ಹೇಳಿದೆ. ಹೀಗೆ ಪುಚ್ಛವಾಗಿ ಹೇಳಿಸಿಕೊಂಡ ಬ್ರಹ್ಮಕ್ಕೆ ಮುಖ್ಯತ್ವವೆಲ್ಲಿಯದು ?

ಸಿ— ಮುಂದೆ ವಿಚಾರವನ್ನು ಬೆಳಸುವಾಗ ಮತ್ತೆ ಮತ್ತೆ ಇಲ್ಲಿರುವ ಬ್ರಹ್ಮ ಶಬ್ದವೇ ಬಂದಿದೆ. ಆದ್ದರಿಂದ ಅದಕ್ಕೆ ಮುಖ್ಯತ್ವ. —೧೨

ಪೂ— ಇಲ್ಲಿ ಅದನ್ನು ಪುಚ್ಛವೆಂದು ಕರೆದಿರುವ ಮಾತಿನಿಂದ ಅದು ಅವಯವವೆಂದಾಗಿ ಅಮುಖ್ಯವೆಂದು ತೋರುವದಲ್ಲ! —೧೩

ಸಿ— ಹಾಗಲ್ಲ. ಹಿಂದೆ ಹೇಳಿದ ಕೋಶಗಳಿಗೆಲ್ಲ ಪುಚ್ಛವನ್ನು ಹೇಳಿದ ಪದ್ಧತಿಯನ್ನು ಹಿಂಬಾಲಿಸಿ ಇದಕ್ಕೂ ಆ ಮಾತನ್ನುಪಯೋಗಿಸಿದ್ದಾಗಿದೆ. ಆನಂದಮಯನಿಗೆ ನಿಜವಾದ ಅವಯವವಿಲ್ಲ. ಇಲ್ಲಿ ಪುಚ್ಛವೆಂದರೆ ಪುಚ್ಛದಂತೆ ಆಧಾರವೆಂದು ನಮ್ಮ ಅರ್ಥ. ಆದ್ದರಿಂದ ಅದಕ್ಕೆ ಮುಖ್ಯತ್ವ. —೧೩

,, ಬ್ರಹ್ಮವು ಎಲ್ಲಕ್ಕೂ ಕಾರಣವಾದದ್ದು. ಆದ್ದರಿಂದ ಅದು ಆನಂದಮಯನಿಗೂ ಕೂಡ ಕಾರಣ. ಅದ್ದರಿಂದ ಅದು ಮುಖ್ಯ —೧೪

,, ಈ ವಿಚಾರವನ್ನು ಮೊದಲು ಮಾಡಿರುವ ಕಡೆ ಬ್ರಹ್ಮವೆಂಬ ಮಾತಿದೆ. ಆದ್ದರಿಂದ ಇಲ್ಲಿ ಅದನ್ನು ಪುಚ್ಛವೆಂದಿದ್ದರೂ ಮುಖ್ಯ.—೧೫

,, ಆನಂದಮಯನೆಂದರೆ ಜೀವನು. ಈ ವಾಕ್ಯವು ಅವನನ್ನು ಹೇಳುವದಕ್ಕೆ ಹೊರಟದ್ದಲ್ಲ. ಇದು ಎಲ್ಲವನ್ನೂ ಹುಟ್ಟಿಸುವವನನ್ನು ಹೇಳುವದಕ್ಕೆ ಹೊರಟಿರುವ ವಾಕ್ಯ. ಜೀವನಿಗೆ ಆ ಯೋಗ್ಯತೆ ಇಲ್ಲ. —೧೬

,, ಆನಂದಮಯನು ಬ್ರಹ್ಮರಸದಿಂದ ಆನಂದವನ್ನು ಹೊಂದುವವನು. ಆದ್ದರಿಂದ ಅವನು ಇಲ್ಲಿ ಮುಖ್ಯನಲ್ಲ. ಅವನನ್ನು ಆನಂದಗೊಳಿಸುವ ಬ್ರಹ್ಮವು ಮುಖ್ಯ. —೧೭

ಪೂ— ಭೃಗುವಲ್ಲಿಯಲ್ಲಿ ಐದನೇ ಕಡೆ ಹೇಳಿರುವ ಆನಂದವು ಬ್ರಹ್ಮವೆಂದು ನಿರ್ಣಯವಾಗಿರುವದರಿಂದ ಆನಂದಮಯನೆಂದರೆ ಕೂಡ ಬ್ರಹ್ಮವೇ ಎಂದೇಕೆ ಊಹಿಸಬಾರದು ?

ಸಿ— ಆನಂದದಿಂದ ರೂಪುಗೊಂಡದ್ದೆಂಬರ್ಥವುಳ್ಳ ಮಯ(ಟ್) ಎಂಬ ಪ್ರತ್ಯಯವಿರುವದರಿಂದ ಆನಂದಮಯನು ಬ್ರಹ್ಮವಲ್ಲ. ಬ್ರಹ್ಮವು ಇನ್ನೊಂದರಿಂದ ರೂಪುಗೊಂಡದ್ದಲ್ಲ. —೧೮

ಪೂ— ಜೀವನು ಬ್ರಹ್ಮರಸವನ್ನು ಹೊಂದುವವನೆಂದು ಬ್ರಹ್ಮಕ್ಕೂ ಜೀವನಿಗೂ ಭೇದವನ್ನು ಹೇಳುವದನ್ನು ನೋಡಿದರೆ ಇಲ್ಲಿ ಹೇಳುವ ಬ್ರಹ್ಮವು ಸಗುಣವೆಂದಾಗುವದಲ್ಲ!

ಸಿ— ಇಲ್ಲಿ ಹೇಳುವ ಬ್ರಹ್ಮದಲ್ಲಿ ಜೀವನು ಸೇರಿ ಒಂದಾಗಿಬಿಡುವನೆಂದು ಹೇಳಿರುವದರಿಂದ ಜೀವಬ್ರಹ್ಮರಿಗೆ ಭೇದವಿಲ್ಲ. ಈ ಕಾರಣದಿಂದಲೂ ಈ ಬ್ರಹ್ಮವು ಮನಸ್ಸಿಗೂ ಮಾತಿಗೂ ನಿಲುಕತಕ್ಕದ್ದಲ್ಲವೆಂದು ಹೇಳಿರುವದರಿಂದಲೂ ಇದು ನಿರ್ಗುಣಬ್ರಹ್ಮವೆ. ಇದನ್ನು ಹೇಳುವದಕ್ಕೆ ಹೊರಟು ದಾರಿಯಲ್ಲಿ ಲೋಕಸಿದ್ಧವಾದ ಭೇದವನ್ನು ಹೇಳಿರುವದು ಬರೀ ಅನುವಾದ ಮಾತ್ರ. —೧೯

೭ ಸೂರ್ಯಮಂಡಲದಲ್ಲಿರುವದೂ ಬ್ರಹ್ಮ (೨೦ . . ೨೧)

ಪೂ— ಸೂರ್ಯಮಂಡಲದಲ್ಲಿಯೂ ಕಣ್ಣಿನಲ್ಲಿಯೂ ಇರುವ ಬಂಗಾರದ ಮೈಯುಳ್ಳ ಪುರುಷನನ್ನು ಉಪಾಸನೆ ಮಾಡಬೇಕೆಂದು ಶ್ರುತಿಯಲ್ಲಿ ಹೇಳಿರುವದರಿಂದ ಅದು ಒಬ್ಬ ಸಂಸಾರಿಯನ್ನು ಉಪಾಸನೆಮಾಡಬೇಕೆಂದು ಹೇಳಿದಂತಾಗುವದಿಲ್ಲವೆ?

ಸಿ— ಅದೇ ಶ್ರುತಿಯಲ್ಲಿ ಮುಂದೆ ಅಲ್ಲಿರುವವನು ಪಾಪಗಳ ಸೋಂಕಿಲ್ಲದವನೆಂದು ಮುಂತಾಗಿ ಹೇಳಿರುವದರಿಂದ ಅಲ್ಲಿರುವ ಪುರುಷನೆಂದರೆ ಪರಮಾತ್ಮನೆ. ಅವನಿಗೆ ಬಂಗಾರದ ಮೈ ಮೊದಲಾದ ರೂಪುಗಳನ್ನು ಹೇಳಿರುವದು ಉಪಾಸನೆಗಾಗಿ ಮಾತ್ರ. —೨೦

,, ಆ ಪುರುಷನು ಸೂರ್ಯಮಂಡಲದಲ್ಲಿದ್ದು ಸೂರ್ಯನಿಗೆ ಕಾಣಬರದವನಾಗಿ ಸೂರ್ಯನನ್ನು ಆಳುತ್ತಿರುವನೆಂದು ಹೇಳಿರುವದರಿಂದಲೂ ಅವನು ಪರಮಾತ್ಮನು. —೨೧

೮ ಆಕಾಶವೆಂದರೂ ಬ್ರಹ್ಮ (೨೨)

ಪೂ— ಜಗತ್ತಿನ ಕಾರಣವು ಆಕಾಶವೆಂದು ಒಂದು ಶ್ರುತಿಯಲ್ಲಿದೆಯಲ್ಲ! ನೀವು ಬ್ರಹ್ಮವೆಂದು ಹೇಗೆ ಹೇಳುತ್ತೀರಿ?

ಸಿ— ಅಲ್ಲಿ ಎಲ್ಲ ಭೂತಗಳಿಗೂ ಆಕಾಶವು ಕಾರಣವೆಂದಿರುವದರಿಂದ ಆ ಆಕಾಶಶಬ್ದಕ್ಕೆ ಆಕಾಶಕ್ಕೂ ಕಾರಣವಾದ ಬ್ರಹ್ಮವೆಂಬ ಅರ್ಥವು

ಮಾತ್ರ ಹೊಂದುತ್ತದೆ. ಯಾವ ಆಳತೆಯು ಕಟ್ಟೂ ಇಲ್ಲದ್ದನ್ನು ಹೇಳು ತ್ತೇನೆಂದು ಮೊದಲುಮಾಡಿ ಆಕಾಶವೆಂದು ಹೇಳಿರುವದರಿಂದಲೂ ಅದಕ್ಕೆ ಬ್ರಹ್ಮವೆಂದರ್ಥ. —೨೨

೯ ಪ್ರಾಣವೆಂದರೂ ಬ್ರಹ್ಮ (೨೩)

ಪೂ — ಇನ್ನೊಂದು ಕಡೆ ಎಲ್ಲ ಭೂತಗಳೂ ಪ್ರಾಣದಲ್ಲಿ ಸೇರಿ ಹೋಗುವ ವೆಂದಿರುವದರಿಂದ ಜಗತ್ಕಾರಣವನ್ನು ಪ್ರಾಣವಾಯುವೆಂದಾದರೂ ಹೇಳ ಬೇಕಾಗುತ್ತದೆಯಲ್ಲ !

ಸಿ — ಅದು ಕೂಡ ಬ್ರಹ್ಮದಲ್ಲಿ ಸೇರಿಹೋಗುವದರಿಂದ ಅಲ್ಲಿ ಪ್ರಾಣ ವೆಂದರೆ ಬ್ರಹ್ಮ. —೨೩

೧೦ ಜ್ಯೋತಿಯೆಂದರೂ ಬ್ರಹ್ಮ (೨೪ . . ೨೭)

ಪೂ — ಪುರುಷನಲ್ಲಿರುವ ಜ್ಯೋತಿಯು ದೇವಲೋಕಕ್ಕಿಂತ (ದೇವಲೋಕಪ್ರ ದೆಶದಿಂದ) ಇನ್ನೂ ಮೇಲಿರುವ ಜ್ಯೋತಿಯೆಂದು ಒಂದು ಶ್ರುತಿ ಇದೆ. ಆದ್ದರಿಂದ ಅದಕ್ಕೆ ಸೂರ್ಯನೇ ಮೊದಲಾದ ಜ್ಯೋತಿಯೆಂದರ್ಥವಾಗು ವದಿಲ್ಲವೆ?

ಸಿ — ಇಲ್ಲ. ಅದಕ್ಕೆ ಭೂತಗಳೆಲ್ಲ ಒಂದು ಪಾದವೆಂದೂ ಅದರ ಇನ್ನೂ ಮೂರು ಪಾದಗಳು ಮೇಲಿರುವವೆಂದೂ ಹೇಳಿದೆ. ಈ ಮಾತು ಬ್ರಹ್ಮಕ್ಕೆ ಮಾತ್ರ ಹೊಂದುತ್ತದೆ. —೨೪

ಪೂ — ಹಿಂದಿನ ವಾಕ್ಯದಲ್ಲಿರುವದು ಗಾಯತ್ರಿಯ ಮೂರು ಪಾದಗಳ ವಿಷ ಯವಲ್ಲವೆ ? ಅಲ್ಲಿ ಆರಂಭವಾಗಿರುವದು ಗಾಯತ್ರೀಛಂದಸ್ಸಿನ ವಿಷಯ. —೨೫

ಸಿ — ಅಲ್ಲಿರುವದು ಗಾಯತ್ರಿಯ ಸ್ವರೂಪದಲ್ಲಿರುವ ಬ್ರಹ್ಮದಲ್ಲಿ ಮನ ಸ್ಸನ್ನು ನೆಲೆಗೊಳಿಬೇಕೆಂಬ ವಿಷಯ. ಆದ್ದರಿಂದ ಅಲ್ಲಿರುವ ಮೂರು ಪಾದಗಳು ಬ್ರಹ್ಮದ್ದೆ. ಗಾಯತ್ರಿಯಲ್ಲಿ ಕಾಣಬರುವ ಬ್ರಹ್ಮವನ್ನು ಉಪಾಸನೆ ಮಾಡಬೇಕೆಂಬುದು ಅಲ್ಲಿಯ ಅರ್ಥ. —೨೫

,, ಎಲ್ಲ ಭೂತಗಳೂ ಒಂದು ಪಾದವೆನ್ನುವ ಮಾತು ಗಾಯತ್ರೀ ಸ್ವರೂಪದಲ್ಲಿರುವ ಬ್ರಹ್ಮಕ್ಕೆ ಹೊಂದಿದ ಹಾಗೆ ಗಾಯತ್ರೀಛಂದಸ್ಸಿಗೆ ಹೊಂದುವದಿಲ್ಲ. —೨೬

ಪೂ— ಗಾಯತ್ರಿಯ ವಾಕ್ಯದಲ್ಲಿರುವ ಮೂರು ಪಾದಗಳು ದೇವಲೋಕದಲ್ಲಿರುವವೆನ್ನುವದು ಬ್ರಹ್ಮಾಂಡದೊಳಗಣ ಮಾತಾಯಿತು. ಇಲ್ಲಿ ದೇವಲೋಕಕ್ಕಿಂತ ಇನ್ನೂ ಮೇಲಿರುವ ಜ್ಯೋತಿಯ ವಿಷಯವಾದ್ದರಿಂದ ಇವೆರಡೂ ಬೇರೆಬೇರೆಯಾಗುವದಿಲ್ಲವೆ ? —೨೭

ಸಿ— ಇಲ್ಲ. 'ದೇವಲೋಕದಲ್ಲಿ' ಎಂದು ಸಪ್ತಮೀವಿಭಕ್ತಿಯನ್ನು ಹೇಳಿದ್ದರೂ ಅದು ದೇವಲೋಕಕ್ಕಿಂತ(ಅತಃ ಪರೋ ದಿವಃ)ಎಂಬ ಪಂಚಮೀ ವಿಭಕ್ತಿಯ ಅರ್ಥವನ್ನೇ ಹೇಳುವದೆಂದು ತಿಳಿಯಬೇಕು. ಆದ್ದರಿಂದ ಅವೆರಡೂ ಬೇರೆಬೇರೆಯಲ್ಲ. —೨೭

೧೧ ಇಂದ್ರನಲ್ಲಿರುವವೂ ಬ್ರಹ್ಮ (೨೮ . . ೩೧)

ಪೂ— ಪ್ರತರ್ದನನನ್ನು ಕುರಿತು ಹೇಳುವಾಗ ಇಂದ್ರನು ತಾನು ಪ್ರಾಣನೆಂದು ಹೇಳಿರುವದರಿಂದ ಆ ವಾಕ್ಯದಲ್ಲಿ ಪ್ರಾಣವಾಯು ಉಪಾಸ್ಯವೆಂದು ತೋರುತ್ತದೆಯಲ್ಲ !

ಸಿ - ಹಾಗಲ್ಲ. ಆ ಮಾತಿನ ಜೊತೆಯಲ್ಲಿಯೇ ತಾನು ಪ್ರಜ್ಞೆಯ ಸ್ವರೂಪನೆಂದೂ ಮುಪ್ಪೂ ಸಾವೂ ಇಲ್ಲದವನೆಂದೂ ಮುಂತಾಗಿ ಹೇಳಿದ್ದಾನೆ. ಆ ಮಾತುಗಳೆಲ್ಲ ಬ್ರಹ್ಮದ ಲಕ್ಷಣ. ಆದ್ದರಿಂದ ಅಲ್ಲಿ ಪ್ರಾಣವೆಂದರೆ ಬ್ರಹ್ಮ —೨೮

ಪೂ—ಅಲ್ಲಿ ಇಂದ್ರನು ತನ್ನ ವಿಷಯವನ್ನು ಹೇಳುವದರಿಂದ ಅದು ಬ್ರಹ್ಮವಾಗಲಾರದು. ಅಲ್ಲಿ ಉಪಾಸನೆ ಮಾಡಬೇಕಾದದ್ದು ಇಂದ್ರನ ಶರೀರವೆ. —೨೯

ಸಿ - ಹಾಗಲ್ಲ. ಆ ಪ್ರಕರಣದಲ್ಲಿ ಅವನೊಳಗಿರುವ ಆತ್ಮಕ್ಕೆ ಸಂಬಂಧಪಟ್ಟ ಆನಂದ, ಅಮೃತತ್ವ-ಮೊದಲಾದ ಮಾತುಗಳು ಹೆಚ್ಚಾಗಿವೆಯೇ ಹೊರತು ಕೈಯಲ್ಲಿ ವಜ್ರವನ್ನು ಹಿಡಿದಿರುವದು ಮೊದಲಾದ ಶರೀರದ ಸಂಬಂಧವಾದ ಮಾತುಗಳಿಲ್ಲ. ಆದ್ದರಿಂದ ಇಂದ್ರನೊಳಗಿರುವ ಪರಮಾತ್ಮನನ್ನು ಉಪಾಸನೆಮಾಡಬೇಕೆಂಪರ್ಥ. —೨೯

ಪೂ— ಇಂದ್ರನಿಗೆ ತಾನು ದೇಹಕ್ಕಿಂತ ಬೇರೆಯಾದ ಬ್ರಹ್ಮವೆಂಬ ಜ್ಞಾನವಿತ್ತೆಂದು ಹೇಳುವದಕ್ಕಾಗುವದಿಲ್ಲವಾಗಿರುವಾಗ ಅವನು ಬ್ರಹ್ಮವನ್ನು ಮತ್ತೊಬ್ಬರಿಗೆ ಹೇಳುವದು ಹೇಗೆ ?

ಸಿ — ಇಂದ್ರನಿಗೂ ಕೂಡ ಶುಕರಿಗೂ ವಾಮದೇವರಿಗೂ ಹೇಗೋ ಹಾಗೆ ಆ ಜ್ಞಾನವಿತ್ತೆನ್ನಬೇಕು. ಅವನು ಶಾಸ್ತ್ರವನ್ನು ಓದಿ ಗುರುಕುಲವಾಸವನ್ನು ಮಾಡಿ ಬ್ರಹ್ಮಸಾಕ್ಷಾತ್ಕಾರವನ್ನು ಮಾಡಿಕೊಂಡಿದ್ದದ್ದರಿಂದ ಅವನು ಇತರರಿಗೆ ಅದನ್ನು ಉಪದೇಶಿಸಬಹುದು. — ೩೦

ಪೂ— ಆ ಶ್ರುತಿಯಲ್ಲಿ 'ಈ ಮಾತಾಡುವವನನ್ನು ತಿಳಿ; ಪ್ರಾಣವೇ ಪ್ರಜ್ಞಾತ್ಮನಾಗಿ ಈ ಶರೀರವನ್ನು ಹಿಡಿದು ನಿಲ್ಲಿಸಿಕೊಂಡಿರುವದು' ಎಂಬರ್ಥವಿದೆ. ಇದರಿಂದ ಆ ವಾಕ್ಯವು ಜೀವನನ್ನೂ ಪ್ರಾಣವಾಯುವನ್ನೂ ಉಪಾಸನೆಮಾಡಬೇಕೆಂದು ಹೇಳಿದಂತೆ ಆಗುತ್ತದೆ. ಆದ್ದರಿಂದ ಅದು ಬರೀ ಬ್ರಹ್ಮೋಪಾಸನೆಯನ್ನು ಹೇಳುವದಿಲ್ಲ. — ೩೧

ಸಿ— ಹಾಗಲ್ಲ. ಅಲ್ಲಿ ಪ್ರಾಣ, ಜೀವ, ಬ್ರಹ್ಮ – ಈ ಮೂರು ಉಪಾಸನೆ ಇದೆ. ಸ್ಥೂಲಾರುಂಧತೀನ್ಯಾಯದಿಂದ, ಎಂದರೆ ಅರುಂಧತಿಯಲ್ಲದ ದೊಡ್ಡ ನಕ್ಷತ್ರವನ್ನು ಮೊದಲು ಅರುಂಧತಿಯೆಂದು ತಿಳಿದುಕೊಂಡು ಆಮೇಲೆ ಅದನ್ನು ಬಿಟ್ಟು ಅದರಿಂದ ನಿಜವಾದ ಅರುಂಧತಿಯನ್ನು ನಿಲುಕಿಸಿಕೊಳ್ಳುವಂತೆ ಪ್ರಾಣದ ಮತ್ತು ಜೀವನ ಉಪಾಸನೆಯು ಬ್ರಹ್ಮಜ್ಞಾನಕ್ಕೆ ಸಾಧನವಾಗಿರುವದೆಂದು ತಿಳಿಯಬೇಕು. —೩೧



## ಪಾದ ೨

### ಬ್ರಹ್ಮವನ್ನು ಗುರ್ತಿಸುವ ಸ್ಪಷ್ಟವಾದ ಮಾತುಗಳಿಲ್ಲದ ಉಪಾಸ್ಯ ಬ್ರಹ್ಮದ ವಾಕ್ಯಗಳ ವಿಚಾರ

---

ಮನೋಮಯನೆಂದರೂ ಬ್ರಹ್ಮ (೧ . . ೮)

ಪೂ— ಮನೋಮಯನನ್ನು ಉಪಾಸನೆ ಮಾಡಬೇಕೆಂದಿರುವ ವಾಕ್ಯದಲ್ಲಿ ಮನೋಮಯತ್ವವೆಂಬ ಧರ್ಮದಿಂದ ಕೂಡಿದವನು ಜೀವನಲ್ಲವೆ? ಆ ವಾಕ್ಯವು ಬ್ರಹ್ಮನನ್ನೆಲ್ಲಿ ಹೇಳುತ್ತದೆ?

ಸಿ—ಅಲ್ಲ. ಅಲ್ಲಿ ಮನೋಮಯನು ಬ್ರಹ್ಮ. ಏಕೆಂದರೆ 'ಎಲ್ಲವೂ ಈ ಬ್ರಹ್ಮ' ಎಂಬ ವಾಕ್ಯದಿಂದ ಅಲ್ಲಿ ಆರಂಭವಾಗಿರುವದು ಬ್ರಹ್ಮದ ವಿಷಯ. —೧

,, ಅಲ್ಲಿ ಹೇಳಿರುವ ಸತ್ಯಸಂಕಲ್ಪತ್ವ ಮೊದಲಾದ ಗುಣಗಳು ಬ್ರಹ್ಮಕ್ಕೆ ಮಾತ್ರ ಹೊಂದುತ್ತವೆ. —೨

,, ಆ ಗುಣಗಳು ಜೀವನಲ್ಲಿ ಕಾಣುವದಿಲ್ಲವಾದ್ದರಿಂದ ಅಲ್ಲಿಯ ಅರ್ಥ ಜೀವನಲ್ಲ. —೩

,, ಬ್ರಹ್ಮವು ಉಪಾಸನೆ ಮಾಡಿಸಿಕೊಳ್ಳತಕ್ಕದ್ದೆಂದೂ ಜೀವನು ಉಪಾಸನೆ ಮಾಡುವವನೆಂದೂ ಹೇಳಿರುವದರಿಂದ ಅಲ್ಲಿ ಉಪಾಸನೆಗಾಗಿ ಹೇಳಿರುವದು ಜೀವನನ್ನಲ್ಲ. —೪

,, ಜೀವನಲ್ಲಿರುವ ಪುರುಷನನ್ನು ಉಪಾಸನೆಮಾಡತಕ್ಕದ್ದೆಂದು ಇನ್ನೊಂದು ಶ್ರುತಿ ಇರುವದರಿಂದ ಇಲ್ಲಿ ಹೇಳಿರುವದು ಜೀವನನ್ನಲ್ಲ. —೫

,, ಯಾವದನ್ನು ಉಪಾಸನೆಮಾಡುತ್ತಾನೊ ಮುಂದೆ ಅದಾಗುತ್ತಾನೆಂದು ಗೀತೆ ಹೇಳುತ್ತದೆ. ಜೀವನನ್ನು ಉಪಾಸನೆ ಮಾಡಿದರೆ ಮುಂದೆ ಅವನು ಜೀವನೇ ಆಗಬೇಕಾಗುತ್ತದೆ. ಜೀವನೇ ಆಗಿರುವವನಿಗೆ ಅದಕ್ಕೆ ಪ್ರಯತ್ನವೇಕೆ? ಆದ್ದರಿಂದ ಅಲ್ಲಿ ಹೇಳಿರುವದು ಜೀವನನ್ನಲ್ಲ. —೬

ಪೂ— ಅವನನ್ನು ಹೃದಯದಲ್ಲಿರುವವನೆಂದು ಉಪಾಸನೆಮಾಡಬೇಕೆಂದಿದೆ. ಪರಮಾತ್ಮನು ಅಷ್ಟು ಸಣ್ಣವನಲ್ಲ. ಆದ್ದರಿಂದ ಅಲ್ಲಿ ಹೇಳಿರುವದು ಪರಮಾತ್ಮನಾಗಲಾರದು. —೭

ಸಿ— ಪರಮಾತ್ಮನನ್ನೇ ಸಣ್ಣ ಸ್ವರೂಪದಲ್ಲಿ ಧ್ಯಾನಿಸುವದಕ್ಕಾಗುತ್ತದೆ. ಎಲ್ಲೆಲ್ಲಿಯೂ ತುಂಬಿರುವ ಸ್ವರೂಪವು ಧ್ಯಾನಕ್ಕೆ ಒಳಗಾಗುವದಿಲ್ಲ. ಎಲ್ಲೆಲ್ಲಿಯೂ ತುಂಬಿರುವ ಆಕಾಶಕ್ಕೆ ಸೂಜಿಯ ಕಣ್ಣಿನಲ್ಲಿ ಹೇಗೆ ಸಣ್ಣ ಸ್ವರೂಪವೋ ಹಾಗೆ ಹೃದಯದಲ್ಲಿ ಬ್ರಹ್ಮದ ಸಣ್ಣ ಸ್ವರೂಪವು ಧ್ಯಾನಕ್ಕಾಗಿ ಹೇಳಿದ್ದು. —೭

ಪೂ— ಬ್ರಹ್ಮವು ಹೃದಯದಲ್ಲಿರುವದೆಂದೊಪ್ಪಿಕೊಂಡರೆ ಜೀವನಂತೆ ಸುಖದುಃಖಗಳಿಗೆ ತಲೆಗೊಡಬೇಕಾದೀತು. ಆದ್ದರಿಂದ ಅಲ್ಲಿ ಬ್ರಹ್ಮ ವನ್ನಿಡಬಾರದು. —೮

ಸಿ— ಹಾಗಲ್ಲ. ಜೀವನು ಪುಣ್ಯಪಾಪಗಳನ್ನು ಮಾಡಿದವನಾದ್ದರಿಂದ ಸುಖದುಃಖಗಳನ್ನು ಭೋಗಿಸುವನು. ಈಶ್ವರನಿಗೆ ಅದಿಲ್ಲವಾದ್ದರಿಂದ ಅವನಿಗೆ ಸುಖದುಃಖಗಳ ತೊಡಕಿಲ್ಲ. —೮

೨ ಎಲ್ಲವನ್ನೂ ಒಳಕೊಳ್ಳುವವನು ಬ್ರಹ್ಮ (೯ . . ೧೦)

ಪೂ— ಬ್ರಹ್ಮವನ್ನೂ ಕ್ಷತ್ರನನ್ನೂ ಎರಡನ್ನೂ ಅನ್ನದಂತೆ ಒಳಕೊಳ್ಳುವವ ನನ್ನು ಉಪಾಸನೆಮಾಡಬೇಕೆಂದು ಒಂದು ಶ್ರುತಿ ಇದೆ. ಅನ್ನವನ್ನು ಒಳಕೊಳ್ಳುವವನು ಜೀವನೆ ಹೊರತು ಬ್ರಹ್ಮ ಹೇಗಾದೀತು ?

ಸಿ— ಅಲ್ಲಿ ಸ್ಥಾವರವನ್ನೂ ಜಂಗಮವನ್ನೂ ಎಲ್ಲವನ್ನೂ ಅನ್ನದಂತೆ ಒಳ ಕೊಳ್ಳುವನೆಂದಿರುವ ಮಾತು ಬ್ರಹ್ಮಕ್ಕೆ ಮಾತ್ರ ಹೊಂದುತ್ತದೆ. ಆದ್ದರಿಂದ ಅದು ಬ್ರಹ್ಮವನ್ನು ಹೇಳುವ ವಾಕ್ಯವೆ. —೯

,, ಆ ವಾಕ್ಯವು ಬ್ರಹ್ಮವನ್ನು ಹೇಳೆಂಬ ಪ್ರಶ್ನೆಗೆ ಉತ್ತರವಾಗಿ ಬಂದಿ ರುವದರಿಂದಲೂ ಬ್ರಹ್ಮದ ಉಪಾಸನೆಯೇ ಅಲ್ಲಿಯ ತಾತ್ಪರ್ಯ. —೧೦

೩ ಗುಹೆಯೊಳಗಣ ಮತ್ತೊಬ್ಬನು ಬ್ರಹ್ಮ (೧೧ . . ೧೨)

ಪೂ— ಗುಹೆಯಲ್ಲಿ ಪ್ರವೇಶಮಾಡಿ ಕರ್ಮಫಲವನ್ನುಣ್ಣುತ್ತಿರುವ ಇಬ್ಬರ ವಿಷಯಕವಾದ ಶ್ರುತಿಯಲ್ಲಿ ಬುದ್ಧಿಯೆಂಬ ಗುಹೆಯಲ್ಲಿ ಪ್ರವೇಶಮಾಡಿ ರುವವರು ಬುದ್ಧಿ ಮತ್ತು ಜೀವ-ಎಂಬಿಬ್ಬರಾಗಬೇಕು.

ಸಿ— ಆ ಇಬ್ಬರಲ್ಲ. ಒಬ್ಬನು ಜೀವ; ಮತ್ತೊಬ್ಬನು ಪರಮಾತ್ಮ. ಒಂದು ಮರದ ಮೇಲಿರುವ ಎರಡು ಹಕ್ಕಿಗಳ ವಿಷಯಕವಾದ ಶ್ರುತಿ ಯಲ್ಲಿರುವಂತೆ ಇಲ್ಲಿಯೂ ಹೃದಯದಲ್ಲಿರುವವರು ಒಬ್ಬನು ಜೀವ ; ಮತ್ತೊಬ್ಬನು ಪರಮಾತ್ಮ. —೧೧

,, ಏಕೆಂದರೆ ಮುಂದಿನ ವಾಕ್ಯದಲ್ಲಿ ಪರಮಾತ್ಮನ ವಿಷಯವೇ ಹೆಚ್ಚಾಗಿದೆ. —೧೨

೪ ಕಣ್ಣಿನಲ್ಲಿರುವವನು ಬ್ರಹ್ಮ (೧೩ .. ೧೭)

**ಪೂ**— ಕಣ್ಣಿನಲ್ಲಿರುವ ಪುರುಷನನ್ನು ಉಪಾಸನೆ ಮಾಡಬೇಕೆಂದಿರುವ ಶ್ರುತಿಯಲ್ಲಿ ಕಣ್ಣಿನಲ್ಲಿರುವವನೆಂದರೆ ಪ್ರತಿಬಿಂಬ ಅಥವಾ ಜೀವನೆಂದು ಸ್ಪಷ್ಟವೆ ಆಗುತ್ತದೆ.

ಸಿ— ಅವನು ಜೀವನಲ್ಲ ; ಬ್ರಹ್ಮ. ಅಲ್ಲಿರುವ ಅಮೃತತ್ವ ಮೊದಲಾದ ಧರ್ಮಗಳು ಬ್ರಹ್ಮದಲ್ಲಿಯೇ ಇರತಕ್ಕವುಗಳು. —೧೩

,, ಸೂರ್ಯಮಂಡಲ, ಹೃದಯ - ಮೊದಲಾದ ಶುದ್ಧವಾದ ಕಡೆಗಳಲ್ಲಿ ಬ್ರಹ್ಮವನ್ನು ಉಪಾಸನೆಮಾಡತಕ್ಕದ್ದೆಂದು ಬೇರೆ ಬೇರೆ ಅನೇಕ ಕಡೆ ಹೇಳಿದೆ. ಕಣ್ಣೂ ಶುದ್ಧವಾದ ಪ್ರದೇಶವಾದ್ದರಿಂದ ಅಲ್ಲಿ ಬ್ರಹ್ಮವನ್ನು ಉಪಾಸನೆಮಾಡುವದು ಯೋಗ್ಯವೆ. —೧೪

,, ಹಿಂದಿನ ವಾಕ್ಯದಲ್ಲಿ ಸುಖಸ್ವರೂಪವಾದ ಬ್ರಹ್ಮದ ವಿಚಾರವಿರುವದರಿಂದ ಕಣ್ಣಿನಲ್ಲಿರುವದೂ ಆ ಬ್ರಹ್ಮವೆ. —೧೫

,, ವೇದಾಂತಶಾಸ್ತ್ರವನ್ನು ತಿಳಿದ ಉಪಾಸಕರಿಗೆ ದೊರೆಯುವ ದೇವಯಾನ ಮೊದಲಾದ ಮಾರ್ಗವೆ ಕಣ್ಣಿನಲ್ಲಿರುವವನನ್ನು ಉಪಾಸನೆ ಮಾಡಿದವರಿಗೆ ದೊರೆಯುವದೆಂದಿರುವದರಿಂದ ಕಣ್ಣಿನಲ್ಲಿರುವವನು ಬ್ರಹ್ಮ. —೧೬

,, ಪ್ರತಿಬಿಂಬವು ಅಲ್ಲಿ ಯಾವಾಗಲೂ ಇರತಕ್ಕದ್ದಲ್ಲವಾದ್ದರಿಂದ ಅದರ ಉಪಾಸನೆ ಯೋಗ್ಯವಲ್ಲ. ಜೀವನಲ್ಲಿ ಅಮೃತತ್ವ ಮೊದಲಾದ ಧರ್ಮಗಳಿಲ್ಲವಾದ್ದರಿಂದ ಅಲ್ಲಿ ಹೇಳಿರುವದು ಅವನ ಉಪಾಸನೆಯಲ್ಲ. —೧೭

೫ ಒಳಗಿದ್ದು ಆಳುವವನು ಬ್ರಹ್ಮ (೧೮ .. ೨೦)

**ಪೂ**— ಭೂಮಿ ಮೊದಲಾದವುಗಳ ಒಳಗಿದ್ದು ಆಳುವವನನ್ನು ಉಪಾಸನೆ ಮಾಡಬೇಕೆಂದಿದೆಯಷ್ಟೆ. ಅವನು ಅವುಗಳ ಅಭಿಮಾನಿಯಾದ ದೇವತೆಯಾಗಬೇಕೇ ಹೊರತು ಅಲ್ಲಿಯ ಅರ್ಥ ಬ್ರಹ್ಮ ಹೇಗಾದೀತು ?

ಸಿ— ಅಲ್ಲಿಯ ಅರ್ಥ ಬ್ರಹ್ಮವೆ. ಅವನು ಅಮೃತನೆಂದು ಮುಂದೆ ಅವನಿಗೆ ಬ್ರಹ್ಮಧರ್ಮವನ್ನು ಹೇಳಿದೆ. ಅಮೃತನೆಂದರೆ ಸಾವಿಲ್ಲದವನೆಂದರ್ಥ. —೧೮

ಪೂ— ಅಲ್ಲಿಗೆ ಪ್ರಧಾನವೆಂದು ಅರ್ಥವನ್ನು ಮಾಡಬಹುದಲ್ಲ!

ಸಿ— ಆಗದು. ಅಲ್ಲಿ ಪ್ರಧಾನದ ಧರ್ಮಗಳಾದ ಸತ್ತ್ವರಜಸ್ತಮೋಗುಣಗಳ ಮಾತೇ ಬಂದಿಲ್ಲ. —೧೯

ಪೂ— ಪ್ರಧಾನವಾಗದಿದ್ದರೆ ಜೀವನಾಗಲಿ.

ಸಿ— ಜೀವನೂ ಅಲ್ಲ. ಕಾಣ್ವರೂ ಮಾಧ್ಯಂದಿನರೂ ಕೂಡ ಜೀವನನ್ನು ಒಳಗಿದ್ದು ಆಳುವವನಿಗಿಂತ ಬೇರೆಯೆಂದು ಹೇಳುತ್ತಾರೆ. ಎಲ್ಲ ಜೀವರೊಳಗೂ ಇದ್ದು ಆಳುವವನು ಬ್ರಹ್ಮವೇ ಹೊರತು ಜೀವನಾಗುವದಿಲ್ಲ. —೨೦

೬ ಕಾಣಬರದ್ದು ಮತ್ತು ಸಿಕ್ಕದ್ದು ಬ್ರಹ್ಮ (೨೧..೨೩)

ಪೂ— ಜ್ಞಾನೇಂದ್ರಿಯಗಳಿಗೂ ಕರ್ಮೇಂದ್ರಿಯಗಳಿಗೂ ಸಿಕ್ಕದ ವಸ್ತುವನ್ನು ಉಪಾಸನೆಮಾಡಬೇಕೆಂದಿರುವ ಕಡೆ ಆ ಮಾತು ಪ್ರಧಾನಕ್ಕೆ ಅಥವಾ ಜೀವಕ್ಕೆ ಹೊಂದುತ್ತದೆ. ಅಲ್ಲಿ ಬ್ರಹ್ಮವೇಕೆ ?

ಸಿ— ಅಲ್ಲಿಯೂ ಬ್ರಹ್ಮವೆ. ಏಕೆಂದರೆ ಅದು ಎಲ್ಲ ಭೂತಗಳಿಗೂ ಕಾರಣವೆಂದು ಮೊದಲಾಗಿ ಹೇಳಿದೆ. —೨೧

,, ಬೇರೆ ಶ್ರುತಿಯಲ್ಲಿ ಬ್ರಹ್ಮವನ್ನು ಜೀವಕ್ಕಿಂತಲೂ ಪ್ರಧಾನಕ್ಕಿಂತಲೂ ಬೇರೆಯಾಗಿ ಹೇಳಿದೆ. ಆದ್ದರಿಂದ ಇಲ್ಲಿ ಜೀವನೂ ಅಲ್ಲ; ಪ್ರಧಾನವೂ ಅಲ್ಲ. —೨೨

,, ಅಗ್ನಿಯು ತಲೆಯೆಂದೂ ಸೂರ್ಯಚಂದ್ರರು ಕಣ್ಣುಗಳೆಂದೂ ಮುಂತಾಗಿ ಅಲ್ಲಿ ಹೇಳಿರುವ ರೂಪವು ಬ್ರಹ್ಮಕ್ಕೆ ಮಾತ್ರ ಹೊಂದುತ್ತದೆ. —೨೩

೭ ವೈಶ್ವಾನರನೆಂದರೆ ಬ್ರಹ್ಮ (೨೪..೩೨)

ಪೂ— ಒಂದು ಶ್ರುತಿಯಲ್ಲಿ ಆತ್ಮ ಅಥವಾ ಬ್ರಹ್ಮ ಯಾರೆಂಬ ಪ್ರಶ್ನೆಯುಂಟಾದಾಗ ವೈಶ್ವಾನರನೆಂದು ಉತ್ತರವು ಬಂದಿದೆ. ಆ ಮಾತಿಗೆ ಬ್ರಹ್ಮವಲ್ಲದ ಎಷ್ಟೋ ಅರ್ಥಗಳಿವೆಯಲ್ಲ ?

ಸಿ— ಬ್ರಹ್ಮವು ಯಾವದೆಂಬ ಪ್ರಶ್ನೆಗೆ ಕೊಟ್ಟಿರುವ ಉತ್ತರಬಲ್ಲಿ ವೈಶ್ವಾನರಶಬ್ದವಿದ್ದರೂ ಅದನ್ನು ಬ್ರಹ್ಮಕ್ಕೇ ಹೊಂದಿಸಬೇಕು. —೨೪

ಸಿ— ಆ ವೈಶ್ವಾನರನ ರೂಪವನ್ನು ಹೇಳುವದಕ್ಕೆ ಹೊರಟು ಅವನಿಗೆ ಅಗ್ನಿಯೇ ತಲೆಯೆಂದು ಮುಂತಾಗಿ ಬ್ರಹ್ಮಧರ್ಮವನ್ನು ಹೇಳಿರುವದು ವೈಶ್ವಾನರ ಶಬ್ದಕ್ಕೆ ಬ್ರಹ್ಮವೇ ಅರ್ಥವೆಂದು ತೋರಿಸುತ್ತದೆ. —೨೫

ಪೂ— ಅವನು ಶರೀರದ ಒಳಹೊಕ್ಕಿರುವನೆಂಬ ಮಾತಿನಿಂದ ಬ್ರಹ್ಮವೆಂದಾಗದೆ ಜಠರಾಗ್ನಿಯೆಂದು ಎದ್ದು ಕಾಣುವದಿಲ್ಲವೆ ? —೨೬

ಸಿ— ಇಲ್ಲ. ಅದು ಜಠರಾಗ್ನಿಯ ರೂಪದಲ್ಲಿ ಬ್ರಹ್ಮವನ್ನು ಉಪಾಸನೆ ಮಾಡೆಂದು ಹೇಳುವದಕ್ಕೆ ಹೊರಟಿರುವ ಮಾತು. ಬರೀ ಜಠರಾಗ್ನಿಗೆ ಅಗ್ನಿಯೇ ತಲೆಯೆಂಬ ಮುಂತಾದ ಮಾತುಗಳು ಹೊಂದುವದಿಲ್ಲ ವಾಜಸನೇಯಿಗಳು ಆ ವೈಶ್ವಾನರನನ್ನು ಒಳಗಿದ್ದು ಆಳುತ್ತಿರುವ ಪುರುಷನೆಂದೂ ಹೇಳುತ್ತಿರುವರು. ಇಷ್ಟೇ ಅಲ್ಲ. ಜಠರಾಗ್ನಿಗೆ ಪುರುಷತ್ವವು ಹೊಂದುವದಿಲ್ಲ. ಎಲ್ಲೆಲ್ಲಿಯೂ ತುಂಬಿರುವ ಪುರುಷತ್ವವು ಬ್ರಹ್ಮಕ್ಕೆ ಹೊಂದುತ್ತದೆ. —೨೬

,, ಅಗ್ನಿಯೇ ತಲೆ ಮೊದಲಾದ ರೂಪವು ಹೊಂದುವದಿಲ್ಲವಾದ್ದರಿಂದ ಅಲ್ಲಿ ಹೇಳಿರುವದು ಹೊರಗಣ ಅಗ್ನಿಯೂ ಅಲ್ಲ; ಅಭಿಮಾನಿದೇವತೆಯೂ ಅಲ್ಲ. —೨೭

,, ಜಠರಾಗ್ನಿಯ ಸ್ವರೂಪದ ಸಂಬಂಧವೇ ಇಲ್ಲದೆ ವೈಶ್ವಾನರ ಶಬ್ದಕ್ಕೇ ಕೇವಲ ಬ್ರಹ್ಮವೇ ಅರ್ಥವಾಗುವದೆಂದು ಜೈಮಿನಿ ಋಷಿಗಳ ಅಭಿಪ್ರಾಯ. ವೈಶ್ವಾನರನೆಂದರೆ ಎಲ್ಲ ಜನರ ಒಳಗಿದ್ದು ಆಳುವವನೆಂದರ್ಥ. ಅಗ್ನಿಶಬ್ದಕ್ಕೂ ಮುಂದಕ್ಕೆ ತೆಗೆದುಕೊಂಡು ಹೋಗುವವನೆಂಬ ಅರ್ಥದಿಂದ ಶ್ರೇಷ್ಠನೆಂದಿಟ್ಟುಕೊಳ್ಳಬಹುದು. —೨೮

ಪೂ—ವ್ಯಾಪಕವಾದ ಬ್ರಹ್ಮವನ್ನು ಸಣ್ಣ ಕಡೆಗಳಲ್ಲಿರುವದೆನ್ನುವದು ಹೇಗೆ ಹೊಂದೀತು?

ಸಿ—ಬ್ರಹ್ಮವು ವ್ಯಾಪಕವಾದದ್ದಾದರೂ ಸಣ್ಣ ಶರೀರವನ್ನು ತಳೆದು ಉಪಾಸಕರಿಗೆ ಪ್ರತ್ಯಕ್ಷವಾಗುವದೆಂದು ಆಶ್ಮರಥ್ಯರ ಅಭಿಪ್ರಾಯ. —೨೯

,, ವ್ಯಾಪಕವಾದ ರೂಪವು ಧ್ಯಾನಕ್ಕೆ ಒಳಗಾಗುವದಲ್ಲವಾದ್ದರಿಂದ ಸಣ್ಣ ಶರೀರ ಉಳ್ಳದ್ದನ್ನಾಗಿ ಭಾವಿಸಬೇಕೆಂದು ಬಾದರಿಗಳ ಅಭಿಪ್ರಾಯ. —೩೦

ಸಿ— ತನ್ನ ದೇಹದ ಅವಯವಗಳಲ್ಲಿ ವ್ಯಾಪಕನಾದ ವೈಶ್ವಾನರನ ಅವಯವಗಳನ್ನು ಭಾವಿಸುವದರಿಂದ ಬ್ರಹ್ಮವು ಸಣ್ಣಶರೀರ ಉಳ್ಳದ್ದಾಗ ಬಹುದೆಂದು ಜೈಮಿನಿಗಳ ಅಭಿಪ್ರಾಯ. —೩೧

,, ಬ್ರಹ್ಮವನ್ನು ಹುಬ್ಬುಗಳ ನಡುವೆ ಉಪಾಸನೆ ಮಾಡಬೇಕೆಂದು ಜಾಬಾಲರು ಹೇಳುವದರಿಂದ ಬ್ರಹ್ಮಕ್ಕೆ ಸಣ್ಣ ಪರಿಮಾಣವು ಹೊಂದುವದು. —೩೨

---

## ಪಾದ ೩

### ಗುರ್ತಿಸುವ ಸ್ಪಷ್ಟವಾದ ಮಾತುಗಳಿಲ್ಲದ ಜ್ಞೇಯಬ್ರಹ್ಮದ ವಾಕ್ಯಗಳ ವಿಚಾರ

೧ ಭೂಮ್ಯಾಕಾಶಗಳ ಮನೆಯು ಬ್ರಹ್ಮವೆ (೧..೭)

ಪೂ—ಭೂಮಿ ಆಕಾಶ ಮೊದಲಾದವುಗಳೆಲ್ಲ ಯಾವದರ ಹಾಸುಹೊಕ್ಕುಗಳಾಗಿವೆಯೋ ಅದನ್ನು ತಿಳಿಯತಕ್ಕದ್ದೆಂಬ ಶ್ರುತಿಯಲ್ಲಿ ಅದು ಬ್ರಹ್ಮಕ್ಕಿಂತ ಬೇರೆಯಾದ ಯಾವದೋ ಒಂದು ಏಕಾಗಿರಬಾರದು?

ಸಿ—'ಅದನ್ನು ಆತ್ಮವನ್ನಾಗಿ ತಿಳಿದುಕೊ' ಎಂದಿರುವದರಿಂದ ಅದು ಬ್ರಹ್ಮದ ಹೊರತು ಇನ್ನೊಂದಾಗುವದಿಲ್ಲ. —೧

,, ಪ್ರೀತಿ, ಹಗೆತನ–ಮೊದಲಾದವುಗಳ ಕಟ್ಟಿನಿಂದ ಕಳಚಿಕೊಂಡಿರುವವರು ತಮ್ಮ ಹೆಸರನ್ನೂ ರೂಪನ್ನೂ ಕಳೆದುಕೊಂಡು ಅದನ್ನು ಪಡೆಯುವರೆಂದಿರುವದರಿಂದ ಅದು ಬ್ರಹ್ಮ. —೨

ಪೂ—ಪ್ರಧಾನವೇಕಾಗಬಾರದು?

ಸಿ—ಅದರ ಸಂಬಂಧವಾದ ಮೂರು ಗುಣಗಳ ಮಾತೇ ಅಲ್ಲಿಲ್ಲವಾದ್ದರಿಂದ. —೩

ಪೂ— ಪ್ರಧಾನವಾಗದಿದ್ದರೆ ಜೀವನಾಗಲಿ.

ಸಿ— ಅವನೂ ಆಗುವದಿಲ್ಲ. ಪ್ರಪಂಚದೊಳಗಿರುವವನು ಪ್ರಪಂಚಕ್ಕೆ ಹೇಗೆ ಆಧಾರನಾದಾನು ? —೪

ಸಿ— ಜೀವನು ತಿಳಿದುಕೊಳ್ಳುವವನೆಂತಲೂ ಆ ಆತ್ಮನು ತಿಳಿಯುಬರ ತಕ್ಕವನೆಂತಲೂ ಶ್ರುತಿಯೇ ಭೇದವನ್ನು ಹೇಳುವವರಿಂದಲೂ ಇಲ್ಲಿಯು ಅರ್ಥವು ಜೀವನಲ್ಲ. — ೫

,, ಈಗ ವಿಚಾರಕ್ಕೆ ತೆಗೆದುಕೊಳ್ಳುವ ಶ್ರುತಿಯು ಬ್ರಹ್ಮವನ್ನು ಹೇಳುವ ಸಂದರ್ಭದಲ್ಲಿ ಬಂದಿರುವದರಿಂದಲೂ ಇಲ್ಲಿಯು ಅರ್ಥವು ಬ್ರಹ್ಮ. —೬

,, ಜೀವನು ಕರ್ಮದ ಫಲವನ್ನುಣ್ಣುವವನೆಂದೂ ಬ್ರಹ್ಮವು ಸಾಕ್ಷಿ ಮಾತ್ರವಾಗಿರುವದೆಂದೂ ಒಂದೇ ಮರದ ಮೇಲಿರುವ ಎರಡು ಹಕ್ಕಿಗಳ ವಿಷಯವಾದ ಮಂತ್ರವು ಹೇಳುತ್ತದೆ. ಇಲ್ಲಿಗೆ ಬ್ರಹ್ಮವೇ ಅರ್ಥ. —೭

೨ ತುಂಬಾದ ವಸ್ತುವೆನ್ನುವದೂ ಬ್ರಹ್ಮವೆ (೮ . . ೯)

ಪೂ— ತುಂಬಾದ ವಸ್ತುವನ್ನು ತಿಳಿಯತಕ್ಕದ್ದೆಂದಿರುವ ಶ್ರುತಿಯಲ್ಲಿ ಆ ವಸ್ತು ಪ್ರಾಣವಾಗಿರಬಹುದು. ಏಕೆಂದರೆ ಪ್ರಾಣವು ದೊಡ್ಡದೆಂಬ ಮಾತೂ ಬಂದಿದೆ.

ಸಿ— ಹಾಗಾಗುವದಿಲ್ಲ. ಪ್ರಾಣನು ಗಾಢನಿದ್ರೆಯಲ್ಲಿ ತಾನೇ ತಾನಾಗಿರುವನು ನಿಜ. ಆ ಪ್ರಾಣನ ಮಾತಾದ ಮೇಲೆ ಬಂದಿರುವ ತುಂಬಾದ ವಸ್ತು ಪ್ರಾಣವಾಗಲಾರದು. —೮

,, ಅದು ಸುಖರೂಪವಾದದ್ದೆಂದೂ ಅಮೃತತ್ವ ಮೊದಲಾದ ಧರ್ಮಗಳುಳ್ಳದ್ದೆಂದೂ ಹೇಳಿರುವ ಮಾತುಗಳು ಬ್ರಹ್ಮಕ್ಕೆ ಚೆನ್ನಾಗಿ ಹೊಂದುವವು. —೯

೩ ಅಕ್ಷರವೆಂಬುದೂ ಬ್ರಹ್ಮವೆ (೧೦ ...೧೨)

ಪೂ— ಆಕಾಶವು ಯಾವದರಲ್ಲಿ ಹಾಸುಹೊಕ್ಕಾಗಿ ಬಂದಿದೆಯೆಂಬ ಮಾತು ಬಂದಾಗ ಅಕ್ಷರವೆಂಬ ಮಾತು ಉತ್ತರವಾಗಿ ಬಂದಿದೆ. ಅದಕ್ಕೆ ಓಂಕಾರವೆಂದರ್ಥವನ್ನು ಹೇಳಬಹುದು.

ಸಿ— ಆಕಾಶದವರೆಗಿನ ಪ್ರಪಂಚವನ್ನೆಲ್ಲ ತನ್ನೊಳಗೆ ಹಿಡಿದಿಟ್ಟುಕೊಳ್ಳುವದು ಓಂಕಾರವೆಂಬ ಅಕ್ಷರಕ್ಕೆ ಆಗಲಾರದು. —೧೦

,, ಆ ಅಕ್ಷರದ ಆಜ್ಞೆಯಿಂದಲೆ ಸೂರ್ಯಚಂದ್ರರು ನಡೆಯುತ್ತಿರುವರೆಂದು ಹೇಳಿರುವದರಿಂದ ಅಕ್ಷರವೆಂದರೆ ಪರದೈವವಾದ ಬ್ರಹ್ಮ. ಜಡವಾದ ಓಂಕಾರವು ಆಜ್ಞೆ ಮಾಡಲಾರದು. —೧೧

ಪೂ —ಅಕ್ಷರವೆಂದರೆ ಪ್ರಧಾನವೆಂದಾಗಲಿ.

ಸಿ— ಪ್ರಧಾನವಲ್ಲವೆಂದು ಸ್ಪಷ್ಟವಾಗುವಂತೆ ನೋಡುವ ಶಕ್ತಿಯುಳ್ಳದ್ದೆಂದು ಮುಂತಾದ ಮಾತಿರುವದರಿಂದ ಅಕ್ಷರವೆಂದರೆ ಬ್ರಹ್ಮವೆ.—೧೨

೪ ಕಾಣಬೇಕೆನ್ನುವದು ಬ್ರಹ್ಮವನ್ನೆ (೧೩)

ಪೂ— ಓಂಕಾರವನ್ನು ಬ್ರಹ್ಮವೆಂದು ಧ್ಯಾನಿಸಬೇಕೆಂದು ಹೇಳಿರುವ ಶ್ರುತಿಯಲ್ಲಿ ಅಂಥವನು ಸೂರ್ಯನನ್ನು ಹೊಂದುವನೆಂಬ ಮಾತಿನಿಂದ ಅಪರಬ್ರಹ್ಮನಾದ ಹಿರಣ್ಯಗರ್ಭನೆ ಅಲ್ಲಿಗೆ ಅರ್ಥ. ಅಲ್ಲಿ ಪರ ಬ್ರಹ್ಮಕ್ಕೆ ಸ್ಥಲವೆಲ್ಲಿದೆ ?

ಸಿ— ಧ್ಯಾನಮಾಡುವವನಿಗೆ ಆ ಪುರುಷನು ಕೊನೆಗೆ ಕಾಣಬರುವನೆಂದಿರುವದಷ್ಟೆ. ಹಾಗೆ ಕಾಣಬರುವ ವಸ್ತು ಎಂದೆಂದಿಗೂ ಇರುವಂಥದ್ದಾಗಬೇಕು ಹಾಗಾದರೆ ಅದು ಸರಿಯಾದ ತಿಳಿವಳಿಕೆಯೆನಿಸುವದು. ಪರ ಬ್ರಹ್ಮನನ್ನು ಕಂಡರೆ ಅದು ಎಂದೆಂದಿಗೂ ಇದ್ದೇ ಇರುವದು. ಹಿರಣ್ಯಗರ್ಭನು ಒಂದಾನೊಂದು ಕಾಲದಲ್ಲಿ ಇಲ್ಲವಾಗುವವನು. ಆದ್ದರಿಂದ ಅವನನ್ನು ಕಾಣುವದೆನ್ನುವದು ಸರಿಯಾದ ತಿಳುವಳಿಕೆಯಾಗುವದಿಲ್ಲ. —೧೩

೫ ಸಣ್ಣ ಆಕಾಶವೆಂದರೂ ಬ್ರಹ್ಮವೆ (೧೪ ...೨೧)

ಪೂ— ಶರೀರದಲ್ಲಿ ಹೃದಯದೊಳಗಿರುವ ಸಣ್ಣ ಆಕಾಶದಲ್ಲಿರುವದನ್ನು ಹುಡುಕಿ ತಿಳಿಯಬೇಕೆಂದು ಶ್ರುತಿ ಇದೆಯಷ್ಟೆ. ಅದು ಆಕಾಶವೆಂಬ ಭೂತವಾಗಿರಬೇಕೇ ಹೊರತು ಅಲ್ಲಿ ಬ್ರಹ್ಮದ ವಿಷಯವೇ ಇಲ್ಲ.

ಸಿ— ಅದು ಸತ್ಯಸಂಕಲ್ಪ ಉಳ್ಳದ್ದೆಂದು ಮುಂತಾಗಿ ಮುಂದೆ ಹೇಳಿರುವದರಿಂದ ಅದಕ್ಕೆ ಅರ್ಥ ಬ್ರಹ್ಮವೆ. — ೧೪

,, ಎಲ್ಲ ಜೀವರೂ ಗಾಢನಿದ್ರೆಯಲ್ಲಿ ಆ ಸಣ್ಣ ಆಕಾಶದಲ್ಲಿ ಪ್ರತಿ ದಿನವೂ ಸೇರಿಹೋಗುವರೆಂದಿದೆ. ಆದ್ದರಿಂದ ಅದು ಬ್ರಹ್ಮವೆ. ಅದನ್ನೆ ಒಂದು ಲೋಕವಾಗಿ ಭಾವಿಸಿ ಶ್ರುತಿಯು ಅದನ್ನು ಬ್ರಹ್ಮ ಲೋಕವೆಂದಿದೆ. ಗಾಢನಿದ್ರೆಯಲ್ಲಿ ಎಲ್ಲ ಜೀವರೂ ಬ್ರಹ್ಮದಲ್ಲಿ ಸೇರಿ

ಸಿ— ಆ ಸಣ್ಣ ಆಕಾಶವು ವರ್ಣ, ಆಶ್ರಮ – ಮೊದಲಾದವುಗಳೆಲ್ಲ ಕಲೆತುಹೋಗದಂತೆ ಅವವುಗಳ ಎಲ್ಲೆಯಲ್ಲಿಟ್ಟುಕೊಂಡಿರುವದೆಂದು ಹೇಳಿರುವದರಿಂದ ಅದು ಬ್ರಹ್ಮ. ಆ ಕೆಲಸವು ಜಡವಾದ ಆಕಾಶ ವೆಂಬ ಭೂತಕ್ಕೆ ದಕ್ಕುವ ಮಾತಲ್ಲ. —೧೬

,, ಆಕಾಶವೆಂಬ ಶಬ್ದಕ್ಕೆ ಬ್ರಹ್ಮವೆಂಬ ಅರ್ಥವು ಶ್ರುತಿಯಲ್ಲಿ ಪ್ರಸಿದ್ಧವಾಗಿಯೂ ಇದೆ. —೧೭

,, ಆ ವಾಕ್ಯದ ಕೊನೆಯಲ್ಲಿ ಜೀವನೆಂಬ ಅರ್ಥವೂ ಬರುವಂತಿದೆ ಅದೇ ಅಗಲಿ. —೧೮

,, ಸತ್ಯಸಂಕಲ್ಪ ಮೊದಲಾದ ಧರ್ಮಗಳು ಆವನಿಗೆ ಹೊಂದುವ ದಿಲ್ಲವಾದ್ದರಿಂದ ಅವನಲ್ಲ. —೧೯

,, ಮುಂದಿನ ವಾಕ್ಯದಲ್ಲಿ ಇವನು ಗಾಢನಿದ್ರಾವಂತನೆಂದು ಹೇಳಿರು ವದರಿಂದ ಇಲ್ಲಿಯ ಅರ್ಥ ಜೀವನೆ. —೧೯

ಸಿ— ಹಾಗಲ್ಲ. ಅಲ್ಲಿ ಗಾಢನಿದ್ರೆಯಲ್ಲಿಯೂ ದೋಷವನ್ನು ಕಂಡು ಶರೀ ರಾಭಿಮಾನವನ್ನು ತೊರೆದ ಮುಕ್ತಜೀವನ ಮಾತು ಬಂದಿದೆ. ಮುಕ್ತಜೀವನು ಬ್ರಹ್ಮವೆ. —೧೯

ಪೂ— ಮುಕ್ತಜೀವನಲ್ಲಿ ಜೀವತ್ವವೆ ಇಲ್ಲದಿರುವದರಿಂದ ಅವನನ್ನು ಗಾಢನಿದ್ರಾವಂತನೆಂದು ಹೇಳಿದ್ದು ಹೇಗೆ?

ಸಿ— ಗಾಢನಿದ್ರಾವಂತನೆಂಬುದು ಜೀವನ ವಿಷಯವಾದರೂ ಆ ವಾಕ್ಯವು ಜೀವನ ಸ್ವರೂಪವನ್ನು ಹೇಳುವದಕ್ಕೆ ಬಂದದ್ದಲ್ಲ; ಜೀವನೂ ಬ್ರಹ್ಮ ವೂ ಬೇರೆಬೇರೆಯಲ್ಲವೆಂದು ಹೇಳುವದಕ್ಕೆ ಬಂದದ್ದು. —೨೦

ಪೂ— ಸಣ್ಣ ಆಕಾಶವನ್ನು ಬ್ರಹ್ಮವೆಂದರೆ ಎಲ್ಲೆಲ್ಲಿಯೂ ತುಂಬಿರುವ ಬ್ರಹ್ಮವನ್ನು ಸಣ್ಣದೆಂದು ಕರೆದಂತೆ ಆಗುತ್ತದೆ. ಆದ್ದರಿಂದ ಸಣ್ಣ ಆಕಾಶವೆಂದರೆ ಜೀವನೆ. —೨೧

ಸಿ— ಸಣ್ಣಪರಿಮಾಣವು ಉಪಾಸನೆಗಾಗಿ ಹೇಳಿದ್ದು. ಆದ್ದರಿಂದ ಅದರ ಅರ್ಥವು ಬ್ರಹ್ಮವೇ. —೨೧

### ೬ ಎಲ್ಲವನ್ನೂ ಬೆಳಗುವದು ಬ್ರಹ್ಮವೆ (೨೨...೨೩)

**ಪೂ**— ಸೂರ್ಯ, ಚಂದ್ರ–ಮೊದಲಾದವರು ಯಾವದನ್ನು ಬೆಳಗಲಾರರೊ ಯಾವದರಿಂದ ಸೂರ್ಯ, ಚಂದ್ರ–ಮೊದಲಾದವರೆಲ್ಲ ಬೆಳಗುವರೊ ಆ ವಸ್ತು ಸೂರ್ಯ ಮತ್ತು ಚಂದ್ರ--ಮೊದಲಾದವರಂತೆ ಲೌಕಿಕವಾದ ತೇಜಸ್ಸಾಗಿರಬೇಕಲ್ಲವೇ ?

**ಸಿ**— ಎಲ್ಲವನ್ನೂ ಬೆಳಗುವದು ಬ್ರಹ್ಮವೇ ; ಲೌಕಿಕವಾದ ತೇಜಸ್ಸಲ್ಲ. —೨೨

,, ಈ ಅರ್ಥವನ್ನೇ ಸ್ಮೃತಿಯೂ ಹೇಳುತ್ತದೆ. —೨೩

### ೭ ಹೆಬ್ಬೆಟ್ಟಿನಷ್ಟಿರುವದೆನ್ನುವದು ಬ್ರಹ್ಮವನ್ನೆ (೨೪...೨೫)

**ಪೂ**— ಶರೀರದ ನಡುವೆ ಇರುವ ಹೆಬ್ಬೆಟ್ಟಿನಷ್ಟು ಮಾತ್ರದ ಪುರುಷನನ್ನು ಹೇಳುವ ಶ್ರುತಿಗೆ ಅಲ್ಲಿ ಅರ್ಥ ಜೀವನಷ್ಟೆ ? ಅಲ್ಲಿ ಬ್ರಹ್ಮಕ್ಕೆ ಅವಕಾಶವೆಲ್ಲಿ ?

**ಸಿ**— ಅವನು ಹಿಂದಿನದನ್ನೂ ಮುಂದಿನದನ್ನೂ ಆಳುವವನೆಂಬ ಮಾತಿರುವದರಿಂದ ಅವನು ಬ್ರಹ್ಮವೆ; ಜೀವನಲ್ಲ. —೨೪

**ಪೂ**— ಎಲ್ಲೆಲ್ಲಿಯೂ ತುಂಬಿರುವದನ್ನು ಹೆಬ್ಬೆಟ್ಟಿನಷ್ಟೆನ್ನಬಹುದೆ ?

**ಸಿ**— ಉಪಾಸನೆಗಳೆಲ್ಲ ಮನುಷ್ಯರಿಗೆ ಹೇಳಿದ್ದು. ಮನುಷ್ಯರ ಬುದ್ಧಿ ದಪ್ಪವಾದ್ದರಿಂದ ಅವರು ಎಲ್ಲೆಲ್ಲಿಯೂ ತುಂಬಿರುವದನ್ನು ಉಪಾಸನೆ ಮಾಡಲಾರರು. ಅವರ ಹೃದಯವು ಸಣ್ಣದು. ಅದರಲ್ಲಿರುವ ಬ್ರಹ್ಮವು ಹೆಬ್ಬೆಟ್ಟಿನಷ್ಟೆಂದರೆ ಒಪ್ಪುವದು. —೨೫

### ೮ ದೇವತೆಗಳಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆ (೨೬...೩೩)

**ಪೂ**— ಉಪಾಸನೆಗಳೆಲ್ಲ ಮನುಷ್ಯರಿಗೆಂದ ಮೇಲೆ ದೇವತೆಗಳು ಮಾಡಬಾರದೇನು?

**ಸಿ**— "ಎಷ್ಟೋ ಉಪಾಸನೆಗಳನ್ನು ದೇವತೆಗಳೂ ಮಾಡಬಹುದು. ಏಕೆಂದರೆ ಅವರಿಗೂ ಬ್ರಹ್ಮಲೋಕದ ಬಯಕೆಯೂ ಉಂಟು. ಕೆಲವು

ಉಪಾಸನೆಗಳು ಅವರಿಗೆ ಹೊಂದುವದಿಲ್ಲವಾದರೂ ಬ್ರಹ್ಮವಿದ್ಯೆಯಲ್ಲಿ ಅವರಿಗೂ ಅಧಿಕಾರವಿದೆ." ಹೀಗೆಂದು ಬಾದರಾಯಣರ ಅಭಿಪ್ರಾಯ. —೨೬

**ಪೂ**— 'ಇಂದ್ರಾಯ' ಮೊದಲಾದ ಚತುರ್ಥೀವಿಭಕ್ತಿಯಿಂದ ಕೂಡಿದ ಶಬ್ದಗಳೆ ದೇವತೆಗಳೆನ್ನುವರು. ಅವು ಜಡವಾದವುಗಳು. ಅವಕ್ಕೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವು ಹೇಗೆ ಸಂಭವಿಸೀತು ?

ಸಿ— ಆ ಚತುರ್ಥೀವಿಭಕ್ತಿಯ ಶಬ್ದದಿಂದ ಕರೆಸಿಕೊಳ್ಳುವ ಶರೀರವುಳ್ಳ ದೇವತೆಗಳಿರುವರೆಂದು ಪುರಾಣಗಳಲ್ಲಿರುವದರಿಂದ ಅವರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರ ಉಂಟು.

**ಪೂ**— ದೇವತೆಗಳಿಗೆ ಶರೀರವಿರುವದಾದರೆ ಒಂದೇ ಕಾಲದಲ್ಲಿ ಅನೇಕ ಕಡೆ ನಡೆಯುವ ಯಾಗಗಳಲ್ಲಿ ಅವರು ಹೇಗೆ ಇರಲಾದೀತು ? —೨೭

ಸಿ— ಹಾಗಲ್ಲ; ಯೋಗಿಗಳಂತೆ ದೇವತೆಗಳು ಯೋಗಪ್ರಭಾವದಿಂದ ಏಕ ಕಾಲದಲ್ಲಿ ಅನೇಕ ಶರೀರಗಳನ್ನು ಧರಿಸಬಹುದು. ಹೀಗೆ ಪುರಾಣಗಳಲ್ಲಿ ಕಂಡುಬಂದಿದೆ. —೨೭

**ಪೂ**— ಇಂದ್ರನೆ ಮೊದಲಾದ ದೇವತೆಗಳಿಗೆ ಶರೀರವಿರುವದೆಂದೊಪ್ಪಿದರೆ, ಶರೀರಗಳು ನಾಶವಾಗತಕ್ಕವುಗಳಾದ್ದರಿಂದ ಅವುಗಳನ್ನು ಹೇಳುವ ವೇದಗಳೂ ನಾಶವಾಗತಕ್ಕವುಗಳಾದಾವಲ್ಲ ! —೨೮

ಸಿ— ಹಾಗಲ್ಲ. ವೇದಗಳಿಂದಲೆ ದೇವತೆಗಳೆ ಮೊದಲಾದವರ ಉತ್ಪತ್ತಿಯಾಗಿರುವದರಿಂದ ವೇದಗಳು ನಾಶವಾಗತಕ್ಕವುಗಳಲ್ಲ. ಪ್ರಲಯದಲ್ಲಿ ಇಂದ್ರ ಮೊದಲಾದವರ ನಾಶವಾದರೂ ವೇದದಲ್ಲಿರುವ ಇಂದ್ರ ಮೊದಲಾದ ಶಬ್ದಗಳನ್ನು ಹಿಡಿದು ಬ್ರಹ್ಮವು ಹುಟ್ಟಿಸುವದು. ಈ ಅಭಿಪ್ರಾಯವು ಶ್ರುತಿಯಲ್ಲಿಯೂ ಸ್ಮೃತಿಯಲ್ಲಿಯೂ ಕೂಡ ಇದೆ. —೨೮

,, ಆದ್ದರಿಂದಲೆ ವೇದವು ನಿತ್ಯ. —೨೯

,, ಇಂದ್ರರು ಪ್ರತಿಸೃಷ್ಟಿಯಲ್ಲಿಯೂ ಸಮಾನವಾದ ನಾಮರೂಪಉಳ್ಳವರಾದ್ದರಿಂದ ಒಬ್ಬ ಇಂದ್ರನು ಹೋಗಿ ಇನ್ನೊಬ್ಬ ಇಂದ್ರನು

ಬರುವನೆಂದರೂ ಬಾಧಕವಿಲ್ಲ. ಬ್ರಹ್ಮವು ಸೂರ್ಯ, ಚಂದ್ರ–ಮೊದಲಾದ ವರನ್ನು ಹಿಂದಿನ ಸೃಷ್ಟಿಯಂತೆ ಮಾಡಿದ ಶ್ರುತಿ ಇದೆ. ಅದೇ ಅರ್ಥ ವನ್ನೆ ಸ್ಮೃತಿಯೂ ಹೇಳುತ್ತದೆ- —೩೦

**ಪೂ**— ಆದಿತ್ಯಮಂಡಲವೇ ಫಲವಾಗಿರುವ ಉಪಾಸನೆಗೆ ಆದಿತ್ಯನಿಗೆ ಅಧಿಕಾರವಿಲ್ಲದಿರುವಂತೆ ಬ್ರಹ್ಮವಿದ್ಯೆಗೂ ದೇವತೆಗಳಿಗೆ ಅಧಿಕಾರವಿಲ್ಲ ವೆಂದು ಜೈಮಿನಿ ಋಷಿಗಳ ಅಭಿಪ್ರಾಯ. —೩೧

,, ಮೇಲೆ ಝಗಝಗಿಸುವ ಲೋಕಗಳನ್ನು ನೋಡಿ ಅವುಗಳನ್ನು ಇಂದ್ರನೆಂದು ಮೊದಲಾಗಿ ಕರೆಯುವ ರೂಢಿ ಇದೆ. ಅವೆಲ್ಲ ಅಚೇತನ ಗಳು. ಅವಕ್ಕೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವೆಂದರೆ ಅರ್ಥವೇ ಇಲ್ಲ. —೩೨

**ಸಿ**— ಆದಿತ್ಯಮಂಡಲವೇ ಫಲವಾಗಿರುವ ಉಪಾಸನೆಗಳಲ್ಲಿ ಆದಿತ್ಯ ಮೊದಲಾದವರಿಗೆ ಅಧಿಕಾರವಿಲ್ಲದಿದ್ದರೂ ಅವರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರ ಉಂಟೆಂದು ಬಾದರಾಯಣರ ಅಭಿಪ್ರಾಯ. ಆ ಮಂಡಲವೇ ಅಲ್ಲದೆ ಅದರಲ್ಲಿ ಅಭಿಮಾನಿಯಾಗಿರುವ ದೇವತೆಯು ಶರೀರ ಉಳ್ಳ ದ್ದಾಗಿರುವದುಂಟೆಂದು ಪುರಾಣಗಳೆಲ್ಲ ಹೇಳುತ್ತಿವೆ. —೩೩

೯ ಶೂದ್ರರಿಗೆ ವೇದದ ಮೂಲಕವಾಗಿ ತಿಳಿಯುವ ಅಧಿಕಾರವಿಲ್ಲ (೩೪....೩೮)

**ಪೂ**— ಬ್ರಹ್ಮವಿದ್ಯೆಯನ್ನು ಕೇಳುವದಕ್ಕೆ ಬಂದ ಒಬ್ಬನನ್ನು ಗುರುಗಳು 'ಎಲೊ, ಶೂದ್ರ' ಎಂದು ಕರೆದಂತೆ ಶ್ರುತಿ ಇದೆ. ಆದ್ದರಿಂದ ಶೂದ್ರ ನಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರ ಉಂಟೆಂದಾಯಿತಷ್ಟೆ?

**ಸಿ**—ಹಾಗಾಗುವದಿಲ್ಲ; ಕೇಳು. ತೇಜಸ್ವಿಯಾಗಿದ್ದ ಜಾನಶ್ರುತಿಯೆಂಬ ರಾಜನನ್ನು ನೋಡಿ ಒಂದು ಹಂಸವು ಬೆರಗಾಯಿತು. ಇನ್ನೊಂದು ಹಂಸವು 'ರೈಕ್ವನ ಮುಂದೆ ಇದೆಂಥ ತೇಜಸ್ಸು' ಎಂದು ಜಾನಶ್ರುತಿ ಯನ್ನು ಕಡೆಗಣಿಸಿತು. ಈ ಅವಮಾನದಿಂದ ತಳಮಳಗೊಂಡ ಜಾನ ಶ್ರುತಿಯು ಆಗ ಆ ಹೆಚ್ಚಿನ ತೇಜಸ್ವಿಯಾದ ರೈಕ್ವನನ್ನು ಹುಡುಕುತ್ತ ಬಂದು ಒಂದು ಬಂಡಿಯ ಕೆಳಗೆ ಕುಳಿತಿದ್ದ ಅವನನ್ನು ಕಂಡು ಅವನಿಗೆ ಗೋವುಗಳನ್ನು ಕೊಟ್ಟು ಸತ್ಕರಿಸಿದನು. ಆಗ ರೈಕ್ವನು ಅವನನ್ನು

'ಶೂದ್ರ' ಎಂದು ಕರೆದಿರುವದುಂಟು. ಆದರೆ ಆವನು ಜಾತಿಶೂದ್ರನಲ್ಲ; 'ಹಂಸದ ಮಾತುಗಳನ್ನು ಕೇಳಿ ದುಃಖದಿಂದ ಓಡಿ ಬಂದವನು' ಎಂದರ್ಥ. —೩೪

ಸಿ— ಮುಂದಿನ ವಾಕ್ಯದಲ್ಲಿ ಜಾನಶ್ರುತಿಯನ್ನು ಕ್ಷತ್ರಿಯನಾದ ಚೈತ್ರರಥನ ಸಾಲಿನಲ್ಲಿ ಸೇರಿಸಿದ್ದಾರೆ. ಆದ್ದರಿಂದ ಜಾನಶ್ರುತಿಯು ಕ್ಷತ್ರಿಯ. —೩೫

,, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ—ಈ ಮೂವರಿಗೂ ಶಾಸ್ತ್ರವು ಉಪನಯನ ಮೊದಲಾದ ಸಂಸ್ಕಾರವನ್ನು ಹೇಳುತ್ತದೆ. ಶೂದ್ರರಿಗೆ ಅದಿಲ್ಲವಾದ್ದರಿಂದ ಶೂದ್ರರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲ. —೩೬

,, ಶೂದ್ರನಲ್ಲವೆಂದು ತಿಳಿದ ಮೇಲೆಯೇ ಜ್ಞಾನಿಗಳು ಬ್ರಹ್ಮೋಪದೇಶವನ್ನು ಮಾಡಿರುವದು ಶ್ರುತಿಯಲ್ಲಿ ಕಂಡುಬಂದಿದೆ. ಜಾತಿಗೊತ್ತಿಲ್ಲದ ಒಬ್ಬನು ನಿಜವನ್ನು ಹೇಳಿದ್ದನ್ನು ನೋಡಿ, ಬ್ರಾಹ್ಮಣನಲ್ಲದವನು ಹೀಗೆ ಆಡಲಾರನೆಂದು, ಜಾಬಾಲನಿಗೆ ಬ್ರಹ್ಮವಿದ್ಯೆಯನ್ನು ಹೇಳಿದ್ದು ಶ್ರುತಿಯಲ್ಲಿದೆ. —೩೭

,, ಶೂದ್ರರಿಗೆ ವೇದವನ್ನು ಓದುವದಕ್ಕೂ ಕೇಳುವದಕ್ಕೂ ಅರ್ಥವನ್ನು ತಿಳಿಯುವದಕ್ಕೂ ಅವಕಾಶವಿಲ್ಲವಾದ್ದರಿಂದ ಅವರಿಗೆ ವೇದಮೂಲಕವಾದ ಬ್ರಹ್ಮವಿದ್ಯೆಯಲ್ಲ ಅಧಿಕಾರವಿಲ್ಲ. ಈ ಅಭಿಪ್ರಾಯವನ್ನು ಸ್ಮೃತಿಯು ಹೇಳುತ್ತದೆ. —೩೮

೧೦ ಜಗತ್ತಿಗೆ ಭಯವನ್ನುಂಟು ಮಾಡುವ ಪ್ರಾಣವೆಂದರೂ ಬ್ರಹ್ಮವೆ (೩೯)

**ಪೂ**— ಜಗತ್ತೆಲ್ಲ ಪ್ರಾಣದ ಭಯದಿಂದ ನಡೆಯುತ್ತೆನ್ನುವಾಗ ಪ್ರಾಣವೆಂದರೆ ಪ್ರಾಣವಾಯುವೆಂದು ಸ್ಪಷ್ಟವಾಗುತ್ತದೆ.

ಸಿ—ಜಗತ್ತೆಲ್ಲ ಹೆದರಿ ನಡೆಯುವದು ಬ್ರಹ್ಮದ ಆಜ್ಞೆಯಿಂದಲೆ. —೩೯

೧೧ **ಹೆಚ್ಚಿನ ಬೆಳಕೆಂದರೂ ಬ್ರಹ್ಮವೆ** (೪೦)

**ಪೂ**— ಗಾಢನಿದ್ರಾವಂತನು ಶರೀವನ್ನು ಬಿಟ್ಟು ಹೆಚ್ಚಿನಬೆಳಕಿನಲ್ಲಿ ಕೂಡಿ ಹೋಗುವನೆಂದು ಶ್ರುತಿ ಇದೆಯಷ್ಟೆ. ಅಲ್ಲಿ ಬೆಳಕೆಂದರೆ ಕಣ್ಣಿನ ಕತ್ತಲೆ

ಯನ್ನು ಕೆಳೆಯುವ ಬೆಳಕಿನ ಜಾತಿಯದೇ ಆಗಿರಬೇಕು. ಬ್ರಹ್ಮದ ಮಾತೇನೂ ಅಲ್ಲಿಲ್ಲ.

ಸಿ— ಅದಕ್ಕೆ ಬ್ರಹ್ಮವೇ ಅರ್ಥ. ಏಕೆಂದರೆ: ಅದು ಬೆಳಕುಗಳಿಗೆಲ್ಲ ಬೆಳಕೆಂದಿದೆ. —೪೦

೧೨ ಹೆಸರುಗಳ ಮತ್ತು ಆಕಾರಗಳ ಇರುವಿಕೆಯ ಕಾರಣವೆಂದರೂ ಬ್ರಹ್ಮವೆ(೪೧)

**ಪೂ**—ಆಕಾಶದಿಂದಲೆ ಹೆಸರುಗಳೂ ಆಕಾರಗಳೂ ಹುಟ್ಟಿರುವವೆಂದು ಶ್ರುತಿ ಇದೆ. ಆಕಾಶವೆಂದರೆ ಭೂತಾಕಾಶವೆಂದು ಸ್ಪಷ್ಟವಾಗುತ್ತದೆ; ಇಲ್ಲಿ ಬ್ರಹ್ಮಕ್ಕೆ ದಾರಿ ಇಲ್ಲ. —೪೧

ಸಿ— ಆಕಾಶವೆಂದರೆ ಅಲ್ಲಿ ಬ್ರಹ್ಮ. ಏಕೆಂದರೆ: ಅದು ಹೆಸರೂ ರೂಪವೂ ಉಳ್ಳ ಎಲ್ಲ ಪದಾರ್ಥಗಳಿಗೂ ಒಳಗೆ ಆತ್ಮವಾಗಿರುವದೆಂದಿರುವದರಿಂದ. —೪೧

೧೪ ವಿಜ್ಞಾನಮಯನೆಂದರೂ ಬ್ರಹ್ಮವೆ (೪೨....೪೩)

**ಪೂ**—ಆತ್ಮನ ವಿಷಯವನ್ನು ಹೇಳುವದಕ್ಕೆ ಹೊರಟಿರುವ ಒಂದು ಕಡೆ ವಿಜ್ಞಾನಮಯನೆ ಆತ್ಮನೆಂದಿದೆ. ಇದರಿಂದ ಆ ವಾಕ್ಯಕ್ಕೆ ಜೀವನೇ ಅರ್ಥವೆಂದು ಸ್ಪಷ್ಟವಾಗುತ್ತದೆ. ಬ್ರಹ್ಮದ ಅರ್ಥವು ಅಲ್ಲಿಲ್ಲ.

ಸಿ— ಅದಕ್ಕೆ ಬ್ರಹ್ಮವೇ ಅರ್ಥ. ಅದು ಬರೀ ಜೀವನ ವಿಷಯವಲ್ಲ. ಗಾಢನಿದ್ರೆಯಲ್ಲಿಯೂ ಪ್ರಾಣವು ಹೊರಬೀಳುವಾಗಲೂ ಜೀವಗಿಂತ ಬೇರೆಯಾದ ಬ್ರಹ್ಮವನ್ನು ಹೇಳುವದುಂಟು. ಇಲ್ಲಿ ಹೇಳಿರುವದು ಆ ಬ್ರಹ್ಮ. —೪೨

,, ಮುಂದಿನ ವಾಕ್ಯದಲ್ಲಿ ಅವನು ಎಲ್ಲರನ್ನೂ ಅಧೀನದಲ್ಲಿಟ್ಟು ಕೊಂಡು ಎಲ್ಲರನ್ನೂ ಆಳುವನೆಂದಿರುವದರಿಂದ ಈ ವಾಕ್ಯಕ್ಕೆ ಅರ್ಥವು ಬ್ರಹ್ಮವೆ. —೪೩



## ಪಾದ ೪

ಬ್ರಹ್ಮವನ್ನು ಹೇಳುವ ಪ್ರಸಂಗದಲ್ಲಿಯೇ ಇದ್ದರೂ ಪ್ರಧಾನವೆಂಬ ಸಂಶಯವನ್ನು ತಂದುಹಾಕುವದೇ ಮುಂತಾದ ಮಾತುಗಳುಳ್ಳ ವಾಕ್ಯಮಾತ್ರಗಳ ವಿಚಾರ.

———

೧ ಅವ್ಯಕ್ತವೆಂದರೆ ಪ್ರಧಾನವಲ್ಲ (೧..೭)

**ಪೂ**— ಶಾಸ್ತ್ರದಲ್ಲಿ ಪ್ರಧಾನದ ಮಾತಿಲ್ಲವೆಂದು ಹೇಳಬಾರದು. ಇಂದ್ರಿಯಗಳಿಗಿಂತ ವಿಷಯಗಳು ಹೆಚ್ಚಿನವೆಂದು ಮುಂತಾಗಿ ಹೇಳುತ್ತ ಮಹತ್ತಿಗಿಂತ ಅವ್ಯಕ್ತವು ಹೆಚ್ಚಿನದೆಂದೂ ಅವ್ಯಕ್ತಕ್ಕಿಂತ ಪುರುಷನು ಹೆಚ್ಚಿನವನೆಂದೂ ಒಂದು ಶ್ರುತಿ ಇದೆ. ಅಲ್ಲಿರುವ ಅವ್ಯಕ್ತವೆಂಬ ಮಾತು ಪ್ರಧಾನವನ್ನೇ ಹೇಳುತ್ತದಲ್ಲ! —೧

**ಸಿ**— ಇಲ್ಲ. ಅಲ್ಲಿ ಶರೀರಕ್ಕೆ ತೇರಿನ ಸ್ವರೂಪವನ್ನು ಕೊಟ್ಟಿದೆ. ಅವ್ಯಕ್ತವೆಂಬ ಮಾತು ಶರೀರವೆಂಬ ಅರ್ಥದಲ್ಲಿ ಬಂದಿದೆ. —೧

**ಪೂ**— ಶರೀರವು ಸ್ಥೂಲವಾದದ್ದು. ಅದಕ್ಕೆ ಅವ್ಯಕ್ತವೆಂಬ ಮಾತು ಹೇಗೆ ಒಪ್ಪುತ್ತದೆ?

**ಸಿ**— ಇಲ್ಲಿ ಶರೀರವೆಂದರೆ ಸೂಕ್ಷ್ಮಶರೀರವನ್ನು ತೆಗೆದುಕೊಳ್ಳಬೇಕು. ಏಕೆಂದರೆ ಅದು ಸ್ಪಷ್ಟವಾಗಿ ಕಾಣಬರತಕ್ಕದ್ದಲ್ಲ. —೨

,, ಸ್ಥೂಲಶರೀರವು ಸೂಕ್ಷ್ಮಶರೀರಕ್ಕೆ ಅಧೀನವಾಗಿರುವದರಿಂದ ಸ್ಥೂಲಶರೀರವನ್ನು ಅದರ ಅರ್ಥವಾಗಿ ಹಿಡಿದರೂ ಹಿಡಿಯಬಹುದು.-೩

,, ಕಪಿಲರ ಶಾಸ್ತ್ರದಂತೆ ಪ್ರಧಾನವು ತಿಳಿದುಕೊಳ್ಳಬೇಕಾದದ್ದು. ಇಲ್ಲಿರುವ ಅವ್ಯಕ್ತವು ತಿಳಿದುಕೊಳ್ಳಬೇಕಾದದ್ದಲ್ಲ. ಆದ್ದರಿಂದ ಇಲ್ಲಿಯ ಅರ್ಥವು ಪ್ರಧಾನವಲ್ಲ. —೪

**ಪೂ**— ಮುಂದಿನ ಶ್ರುತಿಯಲ್ಲಿ ಅವ್ಯಕ್ತವೆಂಬ ಮಾತಿನಿಂದ ಹೇಳುವ ಪ್ರಧಾನವು ತಿಳಿದುಕೊಳ್ಳಬೇಕಾದದ್ದೆಂದು ಹೇಳಿದೆಯಲ್ಲ! —೫

**ಸಿ**— ಆ ವಾಕ್ಯದಲ್ಲಿರುವದು ಪ್ರಾಜ್ಞನಾದ ಬ್ರಹ್ಮ. ಏಕೆಂದರೆ: ಅದು ಬ್ರಹ್ಮವನ್ನು ಹೇಳುವದಕ್ಕೆ ಹೊರಟ ಮಾತುಗಳ ನಡುವೆ ಇದೆ. —೫

,, ಅಲ್ಲಿ ಮಾತಿನ ಸಂದರ್ಭದಲ್ಲಿರುವದು ಅಗ್ನಿ, ಜೀವ, ಬ್ರಹ್ಮ- ಈ ಮೂರರ ವಿಷಯಕವಾದ ಪ್ರಶ್ನೆ ಮತ್ತು ಅದರ ಉತ್ತರ. ಅಲ್ಲಿ ಪ್ರಧಾನದ ವಿಷಯಕವಾದ ಪ್ರಶ್ನೆಯೂ ಇಲ್ಲ; ಉತ್ತರವೂ ಇಲ್ಲ. —೬

,, ಬುದ್ಧಿಗಿಂತ ಮಹತ್ತು ಹೆಚ್ಚಿನದೆನ್ನುವಾಗ ಆ ಮಹತ್ತನ್ನು ಮುಂದೆ ಆತ್ಮವೆಂದು ಕರೆದಿರುವದರಿಂದ ಜೀವನೆಂದರ್ಥ. ಅದೇ ರೀತಿಯಲ್ಲಿ ಅವ್ಯಕ್ತವೆಂದರೆ ಶರೀರ. —೭

೨ ಅಜಾ ಎಂದರೆ ಪ್ರಧಾನವಲ್ಲ (೮...೧೦)

**ಪೂ**— "ಕೆಂಪಗೂ ಬೆಳ್ಳಗೂ ಕಪ್ಪಗೂ ಇರುವದಾಗಿಯೂ ತನ್ನಂಥ ಬಹು ಮಕ್ಕಳನ್ನು ಹಡೆಯುವದಾಗಿಯೂ ಇರುವ 'ಅಜಾ'ವನ್ನು ಒಂದು ಅಜವು ಭೋಗಿಸಿ ಮೋಹಗೊಳ್ಳುತ್ತಿರುವದು; ಇನ್ನೊಂದು ಅಜವು ಆ ಭೋಗಗೊಂಡ 'ಅಜಾ'ವನ್ನು ಅನಾಸಕ್ತಿಯಿಂದ ತೊರೆಯುವದು." ಎಂದು ಒಂದು ಶ್ರುತಿ ಇದೆ. ಅದಕ್ಕಿರುವ ಮೂರು ಬಣ್ಣಗಳಿಗೆ ಸತ್ತ್ವರಜಸ್ತಮೋಗುಣಗಳೆಂದರ್ಥ. ಅದಕ್ಕನುರೂಪವಾದ ಮಕ್ಕಳೆಂದರೆ ತ್ರಿಗುಣಾತ್ಮಕರಾದ ಪ್ರಜೆಗಳು. ಭೋಗಿಸುವ ಒಂದು ಅಜವೆಂದರೆ ಅವಿವೇಕಿಯಾದ ಜೀವ. ತೊರೆಯುವ ಇನ್ನೊಂದೆಂದರೆ ವಿವೇಕಿಯಾದ ವಿರಕ್ತ. ಆದ್ದರಿಂದ ಭೋಗಗೊಂಡ 'ಅಜಾ'ಕ್ಕೆ ಕಪಿಲರ ಪ್ರಧಾನವು ಹೊಂದಿಕೆಯಾದ ಅರ್ಥವಾಗುತ್ತದೆ.

**ಸಿ**— ಮೇಲೆ ಉಬ್ಬಿಕೊಂಡು ಕೆಳಗೆ ಪೊಳ್ಳಿರುವ ಒಂದು ಚಮಸವೆಂಬ ಮಾತಿನಲ್ಲಿ ಏನೊಂದು ಹೆಚ್ಚಿಗೆಯೂ ತೋರದೆ ಅದರ ಅರ್ಥವು ಏನೆಂಬುದು ಸಂಶಯಾಸ್ಪದವಾಗಿರುವಂತೆ 'ಅಜಾ' ಎಂಬ ಮಾತು ಸಂಶಯಾಸ್ಪದವಾಗಿದೆ. ಆದ್ದರಿಂದ ಅದರ ಅರ್ಥವು ಪ್ರಧಾನವೆಂದೇ ಹೇಳುವದಕ್ಕೆ ಬರುವದಿಲ್ಲ. —೮

,, ಚಮಸದ ಸಂಬಂಧವಾದ ವಾಕ್ಯದ ಅರ್ಥವನ್ನು 'ಈ ಶಿರ'ವೆಂಬರ್ಥವಿರುವ ಮುಂದಿನ ಮಾತು ಚಮಸದಂತೆ ಕೆಳಗೆ ಬಾಯಿಯೂ ಮೇಲೆ ಉಬ್ಬಿರುವ ಕೊಳಗದಾಕಾರವೂ ಉಳ್ಳ ತಲೆಯೆಂದು ಗೊತ್ತು ಮಾಡುವಂತೆ ಅಜಾ ಸಂಬಂಧವಾದ ವಾಕ್ಯದ ಅರ್ಥವನ್ನು 'ಕೆಂಪು ಅಗ್ನಿಯ ರೂಪ' ಎಂಬ ಮೊದಲಾದ ಅರ್ಥವಿರುವ ಇನ್ನೊಂದು ಶ್ರುತಿಯು ಗೊತ್ತುಮಾಡುವದು. ಅದರಂತೆ ನೋಡಿದರೆ ಆ ಮೂರು ಬಣ್ಣಗಳಿಗೆ ಅಗ್ನಿ, ಜಲ, ಪೃಥ್ವಿ– ಎಂಬ ಕಾರ್ಯರೂಪವಾದ ಪ್ರಕೃತಿ ಎಂದರ್ಥವಾಗುತ್ತದೆ. ಇನ್ನೊಂದು ಶಾಖೆಯವರೂ ಈ ಅರ್ಥವನ್ನೆ ಒಪ್ಪುತ್ತಾರೆ. —೯

**ಪೂ**— 'ಅಜಾ' ಎಂಬ ಮಾತಿಗೆ ಹುಟ್ಟುವಿಕೆ ಇಲ್ಲದ್ದೆಂದರ್ಥ. ಮೇಲೆ ಹೇಳಿದ ಮೂರು ಭೂತಗಳೂ ಹುಟ್ಟಿದವುಗಳು. ಆದ್ದರಿಂದ ನಿಮ್ಮ

ಅರ್ಥವು ಹೇಗೆ ಹೊಂದುತ್ತದೆ? ಆ ಮೂರು ಭೂತಗಳಲ್ಲಿ ಅಜಾ ಕೃತಿ, ಎಂದರೆ ಮೇಕೆಯ ಆಕಾರವು, ಇಲ್ಲವಲ್ಲ!

ಸಿ— ಮೇಕೆಯ ಹೋಲಿಕೆಯೂ ಇದೆ. ಒಂದಾನೊಂದು ಮೇಕೆಯು ಆ ಮೂರು ಬಣ್ಣಗಳುಳ್ಳದ್ದಾಗಿರಬಹುದು. ಮತ್ತು ತನ್ನಂಥ ಮಕ್ಕಳನ್ನೂ ಹಡೆಯುತ್ತಿರಬಹುದು. ಆದ್ದರಿಂದ 'ಅಜಾ' ಎಂಬ ಮಾತಿಗೆ ಮೂರು ಭೂತಗಳೆಂದರ್ಥ. —೧೦

### ೩ ಇಪ್ಪತ್ತೈದೆಂದಾದರೂ ಅವು ಸಾಂಖ್ಯರ ತತ್ತ್ವಗಳನ್ನು ಹೇಳುವವುಗಳಾಗುವದಿಲ್ಲ. (೧೧...೧೩)

ಪೂ— 'ಐದು ಐವರೂ ಆಕಾಶವೂ ಯಾವದರಲ್ಲಿ ನೆಲೆಸಿವೆಯೋ' ಎಂದು ಮುಂತಾಗಿ ಇರುವ ಶ್ರುತಿಯಲ್ಲಿ ತೋರಿಬರುವ ಇಪ್ಪತ್ತೈದು ಸಾಂಖ್ಯರ ತತ್ತ್ವಗಳೆಂದು ಸ್ಪಷ್ಟವಾಗುತ್ತದೆ.

ಸಿ— ಅಲ್ಲ. ಲೋಕದಲ್ಲಿ ಇಪ್ಪತ್ತೈದು ಸಂಖ್ಯೆಯುಳ್ಳ ಪದಾರ್ಥಗಳು ಎಷ್ಟೋ ಇವೆ. ಆಕಾಶವನ್ನು ಇಪ್ಪತ್ತೈದರಿಂದ ಹೊರಗುಮಾಡಿ ಹೇಳಿರುವದರಿಂದ ಅವರು ಆ ಶ್ರುತಿಯ ಬಲದ ಮೇಲೆ ಇಪ್ಪತ್ತಾರು ತತ್ತ್ವಗಳನ್ನು ಹೇಳಬೇಕಾದೀತು. —೧೧

,, ಅದರ ಅರ್ಥವು ಆ ವಾಕ್ಯದ ಕೊನೆಯಲ್ಲಿ ಗೊತ್ತಾಗುತ್ತದೆ. 'ಸ್ಯುಃ ಪುಮಾಂಸಃ ಪಂಚಜನಾಃ' ಎಂಬ ನಿಘಂಟುವಿನ ವಚನದಂತೆ ಪಂಚಜನರೆಂದರೆ ಪುರುಷರೆಂದರ್ಥ. ಅಥವಾ ಪುರುಷರ ಸಂಬಂಧ ವಾದ ಪ್ರಾಣ, ಕಣ್ಣು, ಕಿವಿ, ಅನ್ನ, ಮನಸ್ಸು – ಈ ಐದೆಂದರ್ಥ. —೧೨

ಪೂ— ಕಾಣ್ವರ ಪಾಠದಲ್ಲಿ ಅನ್ನವೆಂಬುದಿಲ್ಲ! —೧೩

ಸಿ— ಅಲ್ಲಿ ತೇಜಸ್ಸುಕೂಡಿ ಐದಾಗುವದು. —೧೩

### ೪ ಆಕಾಶ ಮೊದಲಾದವುಗಳಿಗೆ ಕಾರಣವು ಬ್ರಹ್ಮವೇ ಎಂದು ಎಲ್ಲ ಕಡೆಯಲ್ಲಿಯೂ ಹೇಳಿರುವದರಿಂದ ಶ್ರುತಿಗಳಿಗೊಂದ ಕ್ಕೊಂದಕ್ಕೆ ವಿರೋಧವಿಲ್ಲ (೧೪....೧೫)

ಪೂ— ಮೊದಲಿದ್ದದ್ದರಿಂದ ಸೃಷ್ಟಿಯೆಂದು ಒಂದು ಕಡೆ ಇದೆ. ಮೊದಲಿಲ್ಲ ದ್ದರಿಂದ ಸೃಷ್ಟಿಯೆಂದು ಇನ್ನೊಂದು ಕಡೆ ಇದೆ. ತನ್ನಿಂದ ತಾನೆ

ಬಂದಿತೆಂದು ಮತ್ತೊಂದು ಕಡೆ ಇದೆ. ಇದಲ್ಲದೆ ಒಂದುಕಡೆ ಆಕಾಶವು ಮೊದಲಾಯಿತೆಂದಿದೆ. ಇನ್ನೊಂದು ಕಡೆ ತೇಜಸ್ಸು ಮೊದಲಾಯಿತೆಂದಿದೆ. ಹೀಗೆಲ್ಲ ಒಂದೊಂದು ಕಡೆ ಒಂದೊಂದು ರೀತಿ ಇರುವಾಗ ಜಗತ್ತು ಬ್ರಹ್ಮದಿಂದಲೆ ಹುಟ್ಟಿತೆಂದು ಹೇಗೆ ಹೇಳುತ್ತೀರಿ?

ಸಿ— ಹುಟ್ಟಿದ ಆಕಾಶ ಮೊದಲಾದವುಗಳ ಕ್ರಮದ ವಿಷಯದಲ್ಲಿ ವಿರೋಧವು ಕಂಡುಬಂದರೂ ಹುಟ್ಟಿಸಿದ್ದು ಬ್ರಹ್ಮವೆಂಬ ಮಾತಿಗೆ ಎರಡಿಲ್ಲ. —೧೪

,, ಇಲ್ಲದ್ದರಿಂದ ಹುಟ್ಟಿತೆನ್ನುವದು ಅದನ್ನು ತಪ್ಪೆಂದು ತಿಳಿಸುವದರ ಮೂಲಕ ಇದ್ದದ್ದರಿಂದ ಹುಟ್ಟಿತೆನ್ನುವ ಅಭಿಪ್ರಾಯವನ್ನು ಹುರಿದುಂಬಿಸುವದಕ್ಕೆ ಹೇಳಿದ ಮಾತಾಗಿರುವದು. —೧೫

**೫ ಜಗತ್ತಿನ ಕಾರಣವು ಬರೀ ಜೀವನೂ ಪ್ರಾಣನೂ ಅಲ್ಲ (೧೬..೧೮)**

**ಪೂ**— ಈ ಪುರುಷರ ಕರ್ತೃ ಯಾರೊ ಈ ಜಗತ್ತು ಯಾರ ಕೆಲಸವೋ ಅದನ್ನು ತಿಳಿಯಬೇಕೆಂದಿರುವ ವಾಕ್ಯದಲ್ಲಿ ನೋಡಿದರೆ ಕೆಲಸಗಳೆಲ್ಲ ಪ್ರಾಣದ ಆಶ್ರಯದಿಂದ ನಡೆಯುವದರಿಂದ ಇಲ್ಲಿ ಅದನ್ನೆ ಅರ್ಥವಾಗಿ ಹೇಳಬೇಕು.

ಸಿ— ಈ ವಾಕ್ಯವು ಜಗತ್ತಿನ ಕಾರಣವನ್ನು ಹೇಳುವದಾದ್ದರಿಂದ ಇಲ್ಲಿಯ ಅರ್ಥವು ಪ್ರಾಣವಲ್ಲ; ಪ್ರಾಣವು ಜಗತ್ತಿನೊಳಗೆ ಸೇರಿದ್ದು. —೧೬

**ಪೂ**—ಕರ್ತೃವೆಂಬ ಮಾತಿನಿಂದ ಜೀವನೆಂದೂ ತೋರುತ್ತದೆ. ಹೀಗೆ ಜೀವ ಮತ್ತು ಮುಖ್ಯಪ್ರಾಣ–ಇವೆರಡೂ ಎದ್ದು ಕಾಣುತ್ತಿರುವಾಗ ಬ್ರಹ್ಮವೆಲ್ಲಿ ಬಂತು? —೧೭

ಸಿ— ಆಗಲಿ; ಜೀವ, ಮುಖ್ಯಪ್ರಾಣ, ಬ್ರಹ್ಮ– ಈ ಮೂರರ ಉಪಾಸನೆಗಳೂ ಸೇರಿಬರಬಹುದೆಂದು ೧-೧-೩೧ರಲ್ಲಿಯೇ ಹೇಳಿದ್ದೇವೆ. —೧೭

,, ಇಲ್ಲಿ ತೋರುವ ಜೀವರೂಪವಾದ ಅರ್ಥವು ಬ್ರಹ್ಮವನ್ನು ತಿಳಿಯುವದಕ್ಕೆ ಸಾಧನರೂಪವಾದದ್ದೆಂದು ಜೈಮಿನಿ ಋಷಿಗಳು ಹೇಳುತ್ತಾರೆ, ಏಕೆಂದರೆ : ಅಲ್ಲಿರುವ ಪ್ರಶ್ನೆಯಿಂದಲೂ ಉತ್ತರದಿಂದಲೂ ಈ ಅರ್ಥವು ತೇಲುತ್ತದೆ. ಒಂದು ಶಾಖೆಯವರು ಇದೇ ವಾಕ್ಯದಲ್ಲಿ ಜೀವನನ್ನು ಹೇಳಿ ಪರಮಾತ್ಮನನ್ನು ಬೇರೆ ತೋರಿಸುತ್ತಾರೆ. —೧೮

೬ ನೋಡಬೇಕಾದದ್ದೂ ಕೇಳಬೇಕಾದದ್ದೂ ಜೀವರನ್ನಲ್ಲ (೧೯ . . ೨೨)

ಪೂ— ಆತ್ಮನನ್ನು ನೋಡಬೇಕೆಂದೂ ಕೇಳಬೇಕೆಂದೂ ಮುಂತಾಗಿ ಹೇಳುವ ಶ್ರುತಿಯಲ್ಲಿ ಆತ್ಮನೆಂದರೆ ಜೀವನೆಂದು ಎದ್ದು ಕಾಣುತ್ತಿದೆಯಲ್ಲ!

ಸಿ— ಯಾವ ಆತ್ಮನನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಯಿತೆಂದು ಮುಂತಾಗಿರುವ ವಾಕ್ಯದ ಹೊಂದಿಕೆಯನ್ನು ನೋಡಿದರೆ ಆತ್ಮವೆಂದರೆ ಬ್ರಹ್ಮವೆಂದೇ ಅರ್ಥವೆಂದು ಸ್ಪಷ್ಟವಾಗುತ್ತದೆ. —೧೯

ಪೂ— ಜೀವರು ಅನಾದಿಯಾಗಿರತಕ್ಕವರು; ಬ್ರಹ್ಮದಿಂದ ಹುಟ್ಟಿದವರಲ್ಲ. ಹೀಗಿರುವಾಗ ಬ್ರಹ್ಮವನ್ನು ತಿಳಿದರೆ ಜೀವರನ್ನು ಹೇಗೆ ತಿಳಿದಂತಾದೀತು?

ಸಿ— ಬ್ರಹ್ಮನನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಗುವದೆಂಬುದರಿಂದಲೆ ಜೀವರು ಬ್ರಹ್ಮದಿಂದ ಹುಟ್ಟಿದವರೆಂದಾಯಿತು. ಜೀವರೂ ಪಂಚಭೂತಗಳಂತೆ ಬ್ರಹ್ಮದಿಂದ ಹುಟ್ಟಿದವರೆಂದೂ ಕಾರ್ಯಕಾರಣಗಳಿಗೆ ಭೇದವೂ ಅಭೇದವೂ ಎರಡೂ ಸಲ್ಲುವವೆಂದೂ ಆದ್ದರಿಂದ ಬ್ರಹ್ಮವನ್ನು ತಿಳಿದರೆ ಎಲ್ಲನನ್ನೂ ತಿಳಿದಂತಾಗುವದೆಂದೂ ಭೇದಾಭೇದವಾದಿಗಳಾದ ಆಶ್ಮರಥ್ಯರು ಹೇಳುವರು. —೨೦

,, ದೇಹ ಮೊದಲಾದವುಗಳ ಮೇಲಿನ ಅಭಿಮಾನವನ್ನು ಬಿಟ್ಟ ಜೀವನಿಗೆ ಬ್ರಹ್ಮಜ್ಞಾನದಿಂದ ಸರ್ವವಿಜ್ಞಾನವೂ ಆಗುವದೆಂದು ಔಡುಲೋಮಿಗಳ ಅಭಿಪ್ರಾಯ. —೨೧

,, ಜೀವನು ಯಾವಾಗಲೂ ಬ್ರಹ್ಮದ ಪ್ರತಿಬಿಂಬಸ್ವರೂಪನಾಗಿ ಅಭೇದದಿಂದ ಇರುವದರಿಂದ ಬ್ರಹ್ಮವಿಜ್ಞಾನದಿಂದ ಸರ್ವವಿಜ್ಞಾನವೂ ಆಗುವದೆಂದು ಸಿದ್ಧಾಂತಿಗಳಾದ ಕಾಶಕೃತ್ಸ್ನರು ಹೇಳುವರು. —೨೨

೭ ಬ್ರಹ್ಮವು ಬರೀ ನಿಮಿತ್ತಕಾರಣವಲ್ಲ (೨೩ . . ೨೭)

ಪೂ— ಜಗತ್ತಿಗೆ ಪರಮಾಣುಗಳು ಉಪಾದಾನಕಾರಣ; ಬ್ರಹ್ಮವು ಬರೀ ನಿಮಿತ್ತಕಾರಣವಲ್ಲವೆ?

ಸಿ— ಬ್ರಹ್ಮವು ಉಪಾದಾನಕಾರಣವೂ ಆಗಿದೆ. ಯಾವದನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಗುವದೊ ಅದರ ವಿಷಯವನ್ನು ಹೇಳುವದಕ್ಕೆ ಹೊರಟು ಆಡಿರುವ ಮಾತಿನಲ್ಲಿ ಬಂದಿರುವ ಕಾರಣದಿಂದಲೂ ಮಣ್ಣಿನ ದೃಷ್ಟಾಂತವನ್ನು ಕೊಟ್ಟಿರುವದರಿಂದಲೂ ಬ್ರಹ್ಮವು ನಿಮಿತ್ತಕಾರಣವೂ ಆಹುದು; ಉಪಾದಾನಕಾರಣವೂ ಅಹುದು. —೨೩

,, ಬ್ರಹ್ಮವು ತನ್ನ ಇಚ್ಛೆಯಿಂದ ಜಗತ್ತನ್ನು ಹುಟ್ಟಿಸಿತೆನ್ನುವದರಿಂದಲೂ ಅದೇ ಉಪಾದಾನಕಾರಣವೂ ಆಗಿರಬೇಕು. —೨೪

,, ಜಗತ್ತು ಹುಟ್ಟುವದೂ ಇರುವದೂ ಹೋಗುವದೂ ಬ್ರಹ್ಮದಲ್ಲೆಂದು ಸಾಕ್ಷಾತ್ತಾಗಿ ಹೇಳುವದರಿಂದ ಬ್ರಹ್ಮವು ಜಗತ್ತಿಗೆ ಎರಡು ಬಗೆಯ ಕಾರಣಗಳೂ ಆಗಿರುವದು. —೨೫

,, ಬ್ರಹ್ಮದ ಪ್ರಯತ್ನದ ಪರಿಣಾಮವಾಗಿ ಜಗತ್ತಾಯಿತೆನ್ನುವದರಿಂದ ಬ್ರಹ್ಮಕ್ಕೆ ಎರಡು ಬಗೆಯ ಕಾರಣಗಳೂ ಕೂಡುವವು. —೨೬

,, ಬ್ರಹ್ಮವು ಜಗತ್ತಿನ ಉತ್ಪತ್ತಿಸ್ಥಾನವೆಂದು ಸ್ಪಷ್ಟವಾದ ಮಾತಿರುವದರಿಂದ ಬ್ರಹ್ಮವು ಉಪಾದಾನಕಾರಣವೂ ಅಹುದು. —೨೭

೮ ಈ ಉತ್ತರವು ಶಿಷ್ಟರೆನಿಸಿಕೊಳ್ಳಬೇಕೆಂಬ ಇತರ
ಎಲ್ಲ ವಾದಿಗಳಿಗೂ ಆಗುವದು (೨೮)

ಸಿ— ಹೀಗೆ ಪ್ರಧಾನಕ್ಕೇ ಸ್ಥಲವಿಲ್ಲವೆಂದಮೇಲೆ ಇದುವರೆಗೆ ಹೇಳಿದ ಯುಕ್ತಿಗಳಿಂದಲೆ ಜಗತ್ತಿಗೆ ಅಣು ಮೊದಲಾದವುಗಳೇ ಕಾರಣವೆಂಬ ಆಧಾರವನ್ನು ತೋರಿಸುವದಕ್ಕೆ ಬರುವವರ ಮಾತುಗಳು ತಾವಾಗಿಯೇ ಎದ್ದು ಹೋಗುವವು. —೨೯

# ಅಧ್ಯಾಯ ೨

## ಎದುರಾಳಿಗಳಿಗೆ ಸಮಾಧಾನ

---

## ಪಾದ ೧

### ಸ್ಮೃತಿಗಳೂ ಮತ್ತು ಯುಕ್ತಿಗಳೂ ನಮಗೆ ಎದುರಾಳಿಗಳಾಗಿಲ್ಲ

---

೧ ಮನುಸ್ಮೃತಿಯ ಬೆಂಬಲ ಉಂಟು (೧ . . ೨)

**ಪೂ**— ಪ್ರಧಾನವು ಜಗತ್ಕಾರಣವಲ್ಲವೆಂದದ್ದರಿಂದ ಕಪಿಲರ ಸ್ಮೃತಿ ಕೆಲಸಕ್ಕೆ ಬರದೆ ಇರತಕ್ಕಂಥದ್ದಾಯಿತಲ್ಲ ! —೧

ಸಿ —ಬ್ರಹ್ಮವು ಜಗತ್ಕಾರಣವೆನ್ನದಿದ್ದರೆ ಮನುಸ್ಮೃತಿಯು ಕೆಲಸಕ್ಕೆ ಬರದೆ ಇರತಕ್ಕಂಥದ್ದಾಗುವದಲ್ಲ ! ಸ್ಮೃತಿಗಳಿಗೆ ಶ್ರುತಿಯ ಬೆಂಬಲ ಬೇಕು. ಶ್ರುತಿಗೆ ವಿರುದ್ಧವಾದ ಸ್ಮೃತಿಯ ಮಾತು ಒಪ್ಪತಕ್ಕದ್ದಲ್ಲ. —೧

,, ವೇದಾಂತದಲ್ಲಿ ಜಗತ್ಕಾರಣವೆಂದಿರುವ ಮಾಯೆಯನ್ನು ಕಪಿಲರ ಪ್ರಧಾನವೆನ್ನೋಣವೆಂದರೆ ವೇದಾಂತದ ಮಾಯೆ ಈಶ್ವರನ ಅಧೀನದ್ದಾಗಿದೆ; ಕಪಿಲರ ಪ್ರಧಾನವು ಸ್ವತಂತ್ರವಾದದ್ದು. ಹಾಗೂ ಹೀಗೂ ಮಾಯೆಯನ್ನೆ ಪ್ರಧಾನವೆಂದರೂ ಮಹತ್ತು, ಅಹಂಕಾರ-ಮೊದಲಾದವುಗಳಿಗೆ ಬುಡವಿಲ್ಲ ಏಕೆಂದರೆ ಶ್ರುತಿಯಲ್ಲಿ ಅವುಗಳ ಸೊಲ್ಲೇ ಇಲ್ಲ. —೨

೨ ಸಾಂಖ್ಯರಿಗೆಹೇಳಿದ ಉತ್ತರವೆ ಯೋಗಿಗಳಿಗೆ (೩)

ಸಿ— ಈಶ್ವರನಿಂದ ಹೊರಿದುಂಬಿದ ಜಡವಾದ ಪ್ರಧಾನವನ್ನು ಜಗತ್ತಿಗೆ ಉಪಾದಾನಕಾರಣವೆನ್ನುವ ಯೋಗಿಗಳಿಗೂ ಇದೇ ಉತ್ತರ. —೩

೩ ವಿರುದ್ಧಸ್ವಭಾವದವುಗಳು ಒಂದಕ್ಕೊಂದು ಕಾರಣವಾಗಬಹುದು (೪ . . ೧೧)

**ಪೂ**— ಬ್ರಹ್ಮವು ಜ್ಞಾನಾನಂದಸ್ವರೂಪದ್ದೆಂದು ಶ್ರುತಿ ಇದೆ. ಹೀಗೆ ಜಡವಾದ ಪ್ರಪಂಚಕ್ಕೆ ವಿರುದ್ಧಸ್ವಭಾವದ್ದಾಗಿರುವ ಅದು ಪ್ರಪಂಚಕ್ಕೆ ಕಾರಣವಾಗಲಾರದು. —೪

ಶಿ— 'ನೀರು ಯೋಚಿಸಿತು' ಎಂಬ ಮುಂತಾದ ಶ್ರುತಿಯಲ್ಲಿ ಐದು ಭೂತಗಳಿಗೂ ಚೇತನತ್ವವು ತೋರುತ್ತದೆ. ಹೀಗಿರುವಾಗ ಪ್ರಪಂಚವೂ ಬ್ರಹ್ಮವೂ ಒಂದಕ್ಕೊಂದು ವಿರುದ್ಧಸ್ವಭಾವದವುಗಳೆಂದ ಮಾತೇ ನಿಲ್ಲುವದಿಲ್ಲವಲ್ಲ !

**ಪೂ**— ಶ್ರುತಿಸ್ಮೃತಿಗಳಲ್ಲಿ ನೀರು ಮೊದಲಾದವುಗಳು ಯೋಚಿಸಿದವೆಂಬ ಕೆಲಸವೆಲ್ಲ ಅಭಿಮಾನಿದೇವತೆಗಳದೆಂದಿದೆ; ಜಡವಾದ ಭೂತಗಳದಲ್ಲ. ಆದ್ದರಿಂದ ಬ್ರಹ್ಮವೂ ಪ್ರಪಂಚವೂ ಒಂದಕ್ಕೊಂದು ವಿರುದ್ಧಸ್ವಭಾವದವುಗಳೆಂಬ ಮಾತು ನೆಟ್ಟಗೆ ನಿಲ್ಲುತ್ತದೆ. —೫

ಶಿ— ಜಗತ್ತಿನಲ್ಲಿ ಜಡವಾದ ಸಗಣಿಯಲ್ಲಿ ಚೇಳು ಹುಟ್ಟುವದು ಕಂಡು ಬಂದಿದೆ. ಚೇತನವಾದ ಜಾಡರ ಹುಳುವಿನಿಂದ ಜಡವಾದ ನೂಲು ಹೊರಬೀಳುವದು ಕಾಣುತ್ತದೆ. ಹೀಗೆ ಚೇತನವಾದ ಬ್ರಹ್ಮದಿಂದ ಜಡವಾದ ಜಗತ್ತು ಹುಟ್ಟುವದು ಅಸಂಭವವಲ್ಲ. —೬

**ಪೂ**— ಚೇತನವಾದ ಬ್ರಹ್ಮದಿಂದ ಜಡವಾದ ಜಗತ್ತು ಹುಟ್ಟಿತೆನ್ನುವದರಿಂದ ಹುಟ್ಟುವದಕ್ಕಿಂತ ಮುಂಚೆ ಜಗತ್ತು ಇರಲಿಲ್ಲವೆಂದಾಗುತ್ತದೆ. ಮೊದಲಿದ್ದದ್ದೆ ಹುಟ್ಟಿತೆನ್ನುವ ನಿಮಗೆ ಈ ಮಾತು ಹೇಗೆ ಒಪ್ಪುತ್ತದೆ? —೭

ಶಿ— ಅದರಲ್ಲೇನೂ ದೋಷವಿಲ್ಲ. ಈಗ ತೋರುವ ಕಾರ್ಯರೂಪವಾದ ಹೆಸರುಗಳಿಂದಲೂ ಆಕಾರಗಳಿಂದಲೂ ತುಂಬಿರುವ ಪ್ರಪಂಚವು ಆಗ ಇರಲಿಲ್ಲವೆಂದು ನಮ್ಮ ಅಭಿಪ್ರಾಯ. ಈ ಪ್ರಪಂಚವು ಪ್ರಲಯದಲ್ಲಿ ಕಾರಣದ ರೂಪದಲ್ಲಿ ಇತ್ತೆಂದು ನಾವು ಹೇಳುವದರಿಂದ ಅದು ಹುಟ್ಟಬಹುದು. —೭

**ಪೂ**— ಪ್ರಲಯದಲ್ಲಿ ಜಗತ್ತು ಬ್ರಹ್ಮದೊಡನೆ ಕಲೆತುಹೋಗುವದರಿಂದ ಅದು ಮತ್ತೆ ಹುಟ್ಟುವದೆಂಬ ಮಾತು ನಡೆಯುವದಿಲ್ಲ. —೮

ಶಿ— ಭೂಮಿಯಲ್ಲಿ ಕಲೆತು ಹೋಗಿರುವ ಕಪ್ಪೆಯ ಶರೀರಗಳು ಮಳೆಗಾಲದಲ್ಲಿ ಮತ್ತೆ ಹುಟ್ಟುವಂತೆ ಬ್ರಹ್ಮದಲ್ಲಿ ಕಲೆತು ಹೋಗಿ ಸಂಸ್ಕಾರರೂಪದಲ್ಲಿರುವ ಜಗತ್ತು ಮತ್ತೆ ಹುಟ್ಟಬಹುದು. —೯

ಸಿ— ಪ್ರಧಾನವನ್ನು ಜಗತ್ಕಾರಣವೆಂದು ಹೇಳುವವರ ಮತದಲ್ಲಿಯೂ ಈ ದೋಷವಿದ್ದೇ ಇದೆ. ಏಕೆಂದರೆ ಪ್ರಲಯದಲ್ಲಿ ಜಗತ್ತು ಪ್ರಧಾನದಲ್ಲಿ ಕಲಿತು ಹೋಗಿರುತ್ತದೆ. —೧೦

,, ಕಪಿಲರು ಜಗತ್ತಿಗೆ ಪ್ರಧಾನವು ಕಾರಣವೆಂಬವನ್ನು ಬರೀ ಯುಕ್ತಿಯ ಬಲದಿಂದ ತೇಲಿಸಿದ್ದಾರೆ. ಯುಕ್ತಿಗಳು ನೆಲೆಯಾಗಿ ನಿಲ್ಲತಕ್ಕವುಗಳಲ್ಲ. ಯುಕ್ತಿಗಳನ್ನು ಅತ್ತಿತ್ತ ಕದಲವಂತೆ ಮಾಡುವದಕ್ಕೆ ಎಷ್ಟು ಪ್ರಯತ್ನವನ್ನು ಮಾಡಿದರೂ ಸಾಗುವದಿಲ್ಲ. ಏಕೆಂದರೆ ಒಬ್ಬನು ಯುಕ್ತಿಯಿಂದ ಪ್ರಧಾನವು ಜಗತ್ಕಾರಣವೆಂದರೆ ಇನ್ನೊಬ್ಬನು ಯುಕ್ತಿಯಿಂದಲೆ ಅಣುಗಳನ್ನು ಜಗತ್ಕಾರಣವೆನ್ನುತ್ತಾನೆ. ಇವೆರಡರಲ್ಲಿ ಯಾವದನ್ನು ಹಿಡಿಯಬೇಕು? ಆದ್ದರಿಂದ ವೇದದ ಬೆಂಬಲದಿಂದಲೂ ವೇದವು ತೋರಿಸಿಕೊಟ್ಟಿರುವ ಯುಕ್ತಿಗಳ ಬೆಂಬಲದಿಂದಲೂ ಚೇತನವಾದ ಬ್ರಹ್ಮವು ಜಡವಾದ ಜಗತ್ತಿಗೆ ಕಾರಣವೆನ್ನುವದು ನೆಲೆಗೆ ನಿಂತ ಮಾತು. —೧೧

೪ ಇದರಿಂದ ಶಿಷ್ಟರ ಸಾಲಿಗೆ ಸೇರದೆ ಇರುವ ವಾದಿಗಳಿಗೆಲ್ಲ ಉತ್ತರವಿತ್ತಂತಾಯಿತು (೧೨)

ಸಿ— ಜಡವಾದ ಪ್ರಧಾನವನ್ನು ಕಾರಣವೆಂದು ಹೇಳಿದ್ದು ಸರಿಯಲ್ಲವೆಂದು ಯುಕ್ತಿಯಿಂದ ತೋರಿಸಿದ ಮೇಲೆ ಮನು ಮೊದಲಾದ ಹಿರಿಯರ ಸಮ್ಮತಿಯನ್ನು ಪಡೆಯದೆ ಇರುವ ಪರಮಾಣುಕಾರಣವಾದಿಗಳೇ ಮೊದಲಾದವರ ಒಣಯುಕ್ತಿಗಳ ಮಾತೆಲ್ಲ ಸರಿಯಲ್ಲವೆಂದು ಹೇಳಿದಂತೆಯೇ ಆಯಿತು. —೧೨

೫ ಚೇತನವೂ ಜಡಗಳೂ ಬೇರೆಬೇರೆ ಇರಲೂ ಬಹುದು (೧೩)

ಪೂ— ಚೇತನದಲ್ಲಿ ಜಡಗಳೆಲ್ಲ ಒಂದಾಗಿ ಹೋಗುವವರಿಂದ ಚೇತನ, ಜಡ–ಎಂಬ ಭೇದವೆ ಇಲ್ಲದೆ ಹೋಗುವದಲ್ಲ! —೧೩

ಸಿ— ಸಮುದ್ರವೆಲ್ಲ ನೀರೇ ಆದರೂ ಅದರ ಬಗೆಬಗೆಗಳಿಂದ ನೊರೆ, ಅಲೆ–ಮೊದಲಾದವುಗಳು ಬೇರೆಬೇರೆಯೇ ಇದ್ದು ಒಂದಕ್ಕೊಂದು ಕೂಡಿಹೋಗದಿರುವಂತೆ ಚೇತನವೂ ಜಡಗಳೂ ಒಂದಕ್ಕೊಂದು ಕೂಡಿಹೋಗುವದೂ ಇಲ್ಲ; ನೊರೆ ಮೊದಲಾದವುಗಳು ನೀರಿಗಿಂತ ಬೇರೆಯೆನಿಸದಿರು

ವಂತೆ ಚೇತನವೂ ಜಡಗಳೂ ಬ್ರಹ್ಮಕ್ಕಿಂತ ಬೇರೆಯೆನಿಸುವದೂ ಇಲ್ಲ—೧೩

೬ ಜಗತ್ತು ಬ್ರಹ್ಮಕ್ಕಿಂತ ಬೇರೆಯಲ್ಲ (೧೪ ...೨೦)

**ಪೂ**— ಜೀವನೂ ಬ್ರಹ್ಮವೂ ಬೇರೆ ಬೇರೆ ಎನ್ನದಿದ್ದರೂ ಪ್ರಪಂಚವೂ ಬ್ರಹ್ಮವೂ ಬೇರೆಬೇರೆಯಾದ್ದರಿಂದ ಬ್ರಹ್ಮವು ಎರಡನೆಯದೆಂಬುದಿಲ್ಲದ್ದಾಗುವದಿಲ್ಲ.

ಸಿ— ಪ್ರಪಂಚವೂ ಬ್ರಹ್ಮವೂ ಬೇರೆಬೇರೆಯಲ್ಲ. ಏಕೆಂದರೆ ಪ್ರಪಂಚವೆಲ್ಲ ಬ್ರಹ್ಮದಲ್ಲಿ ಹುಟ್ಟುಗಟ್ಟಿದ್ದು. ಹುಟ್ಟುಗಟ್ಟಿದವುಗಳೂ ಅದರ ಆಧಾರವೂ ಒಂದಕ್ಕೊಂದು ಬೇರೆಬೇರೆಯಲ್ಲ. —೧೪

,, ಬ್ರಹ್ಮವಿದ್ದರೆ ಜಗತ್ತು ಕಾಣುತ್ತದೆ. ಬ್ರಹ್ಮಕ್ಕೂ ಪ್ರಪಂಚಕ್ಕೂ ಬೇರೆ ಸಂಬಂಧವು ಎಲ್ಲಿಯೂ ಹೇಳಿಲ್ಲವಾದ್ದರಿಂದ ಬ್ರಹ್ಮಕ್ಕೂ ಪ್ರಪಂಚಕ್ಕೂ ಭೇದವಿಲ್ಲವೆಂದು ತಿಳಿಯಬೇಕು. —೧೫

,, ಪ್ರಪಂಚವು ಬ್ರಹ್ಮದಲ್ಲಿಯೇ ಯಾವಾಗಲೂ ಇರುವದರಿಂದ ಪ್ರಪಂಚವನ್ನು ಬ್ರಹ್ಮಕ್ಕಿಂತ ಬೇರೆಯಲ್ಲವೆಂದು ತಿಳಿಯಬೇಕು. —೧೬

**ಪೂ**— ಸೃಷ್ಟಿಗಿಂತ ಮೊದಲು ಅಸತ್ತು ಇತ್ತೆಂದು ಹೇಳುವದರಿಂದ ಆಗ ಪ್ರಂಪಚವಿರಲಿಲ್ಲವೆಂದಾಗುತ್ತದೆ. ಪ್ರಪಂಚವು ಬ್ರಹ್ಮದಲ್ಲಿಯಾವಾಗಲೂ ಇರುವದೆಂದು ಹೇಗೆ ಹೇಳಲಾದೀತು? —೧೭

ಸಿ— ಆ ವಾಕ್ಯದ ಕೊನೆಯಲ್ಲಿರುವ ಮಾತನ್ನು ಲಕ್ಷ್ಯಕ್ಕೆ ತಂದುಕೊಂಡರೆ ಸೂಕ್ಷ್ಮರೂಪವೆಂಬ ಬೇರೆ ಧರ್ಮದಿಂದ ಜಗತ್ತು ಇತ್ತೆಂದು ಗೊತ್ತಾಗುತ್ತದೆ. ಮೊದಲು ಸೂಕ್ಷ್ಮರೂಪದಲ್ಲಿದ್ದದ್ದೆ ಸೃಷ್ಟಿಯಾಗುವಾಗ ಸ್ಥೂಲತ್ವವನ್ನು ತಾಳಿತೆಂದಿದೆ. ೧೭

,, ಸೃಷ್ಟಿಗಿಂತ ಮೊದಲು ಅದು ಮೊಲದ ಕೊಂಬಿನಂತೆ ಇಲ್ಲವಾಗಿದ್ದರೆ ಅದು ಹುಟ್ಟುತ್ತಲೆ ಇರಲಿಲ್ಲವೆಂಬ ಯುಕ್ತಿಯ ಬಲವೂ ಇದೆ. ಮತ್ತು ಪ್ರಪಂಚವು ಪ್ರಲಯದಲ್ಲಿ ಸೂಕ್ಷ್ಮರೂಪದಲ್ಲಿ ಇತ್ತೆಂಬ ಅರ್ಥದ ಶ್ರುತಿಯೂ ಇದೆ. —೧೮

,, ಬಟ್ಟೆಯು ಒಮ್ಮೆ ಮುಡಿಕೆಯಾಗಿಯೂ ಒಮ್ಮೆ ಹರಡಿಕೊಂಡೂ ಇರಬಹುದಷ್ಟೆ. ಹೀಗೆ ಪ್ರಪಂಚವು ಪ್ರಲಯದಲ್ಲಿ ಸೂಕ್ಷ್ಮವಾಗಿಯೂ ಸೃಷ್ಟಿಯಲ್ಲಿ ಸ್ಥೂಲವಾಗಿಯೂ ಇರುವದೆಂದು ತಿಳಿಯಬೇಕು —೧೯

ಸಿ— ಯೋಗಿಗಳು ಉಸಿರನ್ನು ಬಿಗಿಹಿಡಿದಾಗ ಪ್ರಾಣವಾಯು ಸೂಕ್ಷ್ಮತ್ವವನ್ನು ತಾಳುವದು. ಉಳಿದ ಕಾಲದಲ್ಲಿ ಒಂಬತ್ತು ಬಾಗಿಲುಗಳಲ್ಲಿಯೂ ಓಡಾಡುವದು. ಹೀಗೆ ಪ್ರಪಂಚವೂ ಪ್ರಲಯದಲ್ಲಿ ಸೂಕ್ಷ್ಮವಾಗಿದ್ದು ಸೃಷ್ಟಿಯಲ್ಲಿ ಸ್ಥೂಲವಾಗುವದು. —೨೦

೭ ಇಷ್ಟವಾದದ್ದನ್ನೇ ಹುಟ್ಟಿಸಬೇಕಾಗಿತ್ತೆಂಬ ಮುಂತಾದ ದೋಷಗಳ ಸೋಂಕು ಜೀವಗಿಂತ ಬೇರೆಯಲ್ಲದ ಬ್ರಹ್ಮಕ್ಕಿಲ್ಲ (೨೧ .೨೩)

ಪೂ— ಬ್ರಹ್ಮವು ತಾನೆ ಸೃಷ್ಟಿಯಲ್ಲಿ ಪ್ರವೇಶ ಮಾಡಿ ಜೀವನಾಗಿರುವದರಿಂದ ಅವನು ತನಗೆ ಇಷ್ಟವಾದ ಹೂ, ಗಂಧ–ಮೊದಲಾದವುಗಳನ್ನು ಮಾತ್ರ ಮಾಡಿಕೊಳ್ಳದೆ ಹುಲಿ, ಹಾವು–ಮೊದಲಾದ ಅನಿಷ್ಟವಾದವುಗಳನ್ನು ಮಾಡಿಕೊಂಡಿರುವದು ದೋಷವೆಂದು ಎದ್ದು ಕಾಣುತ್ತದೆ.–೨೧

ಸಿ— ಬ್ರಹ್ಮಸ್ವರೂಪವು ಜೀವರಿಗಿಂತ ತೀರ ಬೇರೆಯಾದದ್ದು. ಬ್ರಹ್ಮವನ್ನು ಸಾಕ್ಷಾತ್ಕಾರಮಾಡಿಕೊಂಡು ದೇಹ ಮೊದಲಾದವುಗಳ ಮೇಲಿನ ಅಭಿಮಾನವನ್ನು ಬಿಡುವವರೆಗೂ ಜೀವಬ್ರಹ್ಮರು ಬೇರೆಬೇರೆಯೆಂದು ಶ್ರುತಿಯೇ ಹೇಳುತ್ತದೆ. ಆ ಜೀವರಿಗೆ ಜಗತ್ತು ಇಷ್ಟವೂ ಅನಿಷ್ಟವೂ ಉಳ್ಳದ್ದಾಗಿದೆ. ಜೀವರು ಜಗತ್ತನ್ನು ಸೃಷ್ಟಿಸಿಯೇ ಇಲ್ಲ. ಜಗತ್ತಿನ ಸೃಷ್ಟಿ ಬ್ರಹ್ಮದಿಂದ. ಬ್ರಹ್ಮಕ್ಕೆ ಇಷ್ಟಾನಿಷ್ಟಗಳಿಲ್ಲ. ಆದ್ದರಿಂದ ತನಗೆ ಇಷ್ಟವಾದ ಮತ್ತು ಅನಿಷ್ಟವಾದ ಸೃಷ್ಟಿಯನ್ನು ಮಾಡಿಕೊಂಡ ದೋಷವು ಬ್ರಹ್ಮಕ್ಕೆ ತಟ್ಟುವದಿಲ್ಲ. —೨೨

ಪೂ— ಇಷ್ಟಾನಿಷ್ಟಗಳು ಯಾರಿಗಾದರೂ ಆಗಲಿ. ಜ್ಞಾನಾನಂದಸ್ವರೂಪವಾದ ಬ್ರಹ್ಮವು ಇಂಥ ಜಗತ್ತನ್ನು ಹೇಗೆ ಸೃಷ್ಟಿಸೀತು?

ಸಿ— ಒಂದು ಭೂಮಿಯಿಂದ ವಜ್ರ, ವೈಢೂರ್ಯ–ಮೊದಲಾದವುಗಳೂ ಆಗಿರುವವು; ಕಾಡುಕಲ್ಲುಗಳೂ ಆಗಿರುವವು. ಒಂದೇ ಅನ್ನರಸದಿಂದ ರಕ್ತ ಮೊದಲಾದ ವಿಚಿತ್ರಸೃಷ್ಟಿಯಾಗಿರುವದು. ಇದರಂತೆ ಬ್ರಹ್ಮದಿಂದ ವಿಚಿತ್ರವಾದ ಜಗತ್ತಾಗಬಹುದು. —೨೩

೮ ಬ್ರಹ್ಮವು ಸಾಧನವಿಲ್ಲದೆ ಜಗತ್ತನ್ನು ಹುಟ್ಟಿಸಬಹುದು (೨೪....೨೫)

ಪೂ— ಮಣ್ಣು ಗಡಿಗೆಯ ಆಕಾರವನ್ನು ತಾಳುವದಷ್ಟೆ. ಆದರೆ ಅದು ಗಡಿಗೆಯಾಗುವದಕ್ಕೆ ಕೋಲು, ಚಕ್ರ ಮತ್ತು ಕುಂಬಾರ ಮೊದಲಾದ

ಹೊರಗಣ ಕಾರಣಗಳು ಬೇಕು. ಹೊರಗಣ ಕಾರಣಗಳಿಲ್ಲದೆ ಒಂಟಿಯಾದ ಬ್ರಹ್ಮವು. ಜಗತ್ತಿನ ಆಕಾರವನ್ನು ತಾಳಲಾರದು. —೨೪

ಸಿ— ಹಾಗಲ್ಲ. ಹಾಲು ಹೊರಗಣ ಕಾರಣವಿಲ್ಲದೆ ಮೊಸರಾಗುವದುಂಟು. ಹಾಗೆ ಬ್ರಹ್ಮದಿಂದ ಪ್ರಪಂಚವಾಯಿತು. ಹೆಪ್ಪು ಹಾಕಿದರೇನೆ ಹಾಲು ಮೊಸರಾಗುವದೆಂಬ ಯುಕ್ತಿಯನ್ನು ಇಲ್ಲಿ ಒಡ್ಡಬಾರದು. ಏಕೆಂದರೆ ಬ್ರಹ್ಮವು ಪ್ರಪಂಚದ ರೂಪವನ್ನು ತಾಳಿರುವದು ಮಾಯೆಯಿಂದ. —೨೪

,, ದೇವತೆಗಳೂ ರಾಕ್ಷಸರೊ ಕಾದುವಾಗ ಮಾಯೆಯಿಂದ ಚತುರಂಗಬಲಗಳನ್ನು ಹುಟ್ಟಿಸಿದರೆಂದು ಹೇಳುತ್ತಿರುವಾಗ ಬ್ರಹ್ಮವು ಮಾಯೆಯಿಂದ ಜಗತ್ತಾಗುವದೇನೂ ದೊಡ್ಡ ಮಾತಲ್ಲ. —೨೫

೯ ಬ್ರಹ್ಮವು ತಾನೆ ಜಗತ್ತಾದರೂ ಜಗತ್ಕಾಲದಲ್ಲಿ ತಾನಿಲ್ಲದೆ ಹೋಗುವದಿಲ್ಲ
(೨೬ ...೨೯)

ಪೂ— ಬ್ರಹ್ಮವನು ನಿರವಯುವವೆಂದಿಟ್ಟುಕೊಂಡರೆ ಬ್ರಹ್ಮವೆಂಬುದೆಲ್ಲ ಜಗದ್ರೂಪವಾಗಿಬಿಡುವದಲ್ಲದೆ ಜಗತ್ತಿರುವಾಗ ಬ್ರಹ್ಮವೇ ಇಲ್ಲದಂತಾಗಿ ಜಗತ್ತು ಬ್ರಹ್ಮದ ಆಧಾರದಿಂದ ಇರುವದೆಂದೂ ಬ್ರಹ್ಮದಿಂದ ಬೆಳಗುತ್ತಿರುವದೆಂದೂ ಹೇಳುವ ಮಾತು ಹೋಗುವದು. ಇನ್ನು ಬ್ರಹ್ಮವನ್ನು ಸಾವಯುವವೆಂದಿಟ್ಟುಕೊಂಡರೆ ಆಗ ಬ್ರಹ್ಮವು ನಿರವಯುವವೆಂಬ ಶ್ರುತಿಯ ಮಾತು ಕೆಲಸಕ್ಕೆ ಬರದೆ ಹೋಗುವದು. —೨೬

ಸಿ— ಬ್ರಹ್ಮದ ವಿಷಯಕ್ಕೆ ವೇದವು ಪ್ರಮಾಣ. ಆದ್ದರಿಂದ ವೇದವು ಹೇಳುವಂತೆ ಅದು ನಿರವಯುವವೆಂದೂ ಜಗತ್ತಿಗೆ ಆಧಾರವೆಂದೂ ಜಗತ್ತನ್ನು ಬೆಳಗುವದೆಂದೂ ಎಲ್ಲವನ್ನೂ ಒಪ್ಪಬೇಕು. ಮಾಯಾಶಕ್ತಿಯಿಂದ ಕೂಡಿದ ಬ್ರಹ್ಮವು ಜಗತ್ತಿನ ರೂಪವನ್ನು ತಾಳಿ ತೋರಿಕೊಳ್ಳುತ್ತಿರುವದು. ಹಾವು, ಹೂಮಾಲೆ-ಮೊದಲಾದವುಗಳ ರೂಪವನ್ನು ತಾಳಿದರೂ ಹಗ್ಗವು ಆ ಕಾಲದಲ್ಲಿಯೂ ತನ್ನ ರೂಪದಿಂದ ಇದ್ದೇ ಇರುವಂತೆ ಜಗತ್ತಿನ ರೂಪವನ್ನು ತಾಳಿದ ಬ್ರಹ್ಮವು ಜಗತ್ತಿರುವ ಕಾಲದಲ್ಲಿಯೂ ತನ್ನ ರೂಪದಿಂದ ಇದ್ದೇ ಇರುವದು. —೨೭

ಪೂ— ನಿರವಯವನಾದ ಜೀವನ ಕನಸಿನಲ್ಲಿ ಎಚ್ಚರದ ಜಗತ್ತಿನಂತೆಯೇ ನಿದ್ರಾದೋಷದಿಂದ ವಿಚಿತ್ರಸೃಷ್ಟಿಯು ಕಾಣುವಂತೆ ನಿರವಯವನಾದ ಪರಮಾತ್ಮನಲ್ಲಿ ಮಾಯೆಯಿಂದ ಜಗತ್ತು ತೋರಬಹುದು. —೨೮

,, ಬ್ರಹ್ಮವು ಜಗತ್ತಿನ ರೂಪವನ್ನು ತಾಳಿದರೆ ಜಗತ್ತಾಗಿರುವ ಕಾಲದಲ್ಲಿ ಬ್ರಹ್ಮವೇ ಇಲ್ಲದಂತಾಯಿತೆಂದು ಹೇಳಿದ ದೋಷವು ಪ್ರಧಾನವಾದಿಗೂ ಇದ್ದೇ ಇದೆ. ಪ್ರಧಾನವು ನಿರವಯವವಾದ್ದರಿಂದ ಅದೂ ಜಗತ್ತಾಗಿರುವ ಕಾಲದಲ್ಲಿ ಇಲ್ಲವೆ ಹೋಗಬೇಕಾಗುತ್ತದೆ. —೨೯

೧೦ ಬ್ರಹ್ಮಕ್ಕೆ ಅವಯವಗಳಿಲ್ಲದಿದ್ದರೂ ಅದು ಜಗತ್ತನ್ನು ಮಾಡಬಹುದು (೩೦....೩೧)

ಸಿ— ಬ್ರಹ್ಮವು ಸರ್ವಶಕ್ತಿಗಳೂ ಉಳ್ಳದ್ದೆಂದು ಶ್ರುತಿ ಇದೆ. —೩೦

ಪೂ— ಶಕ್ತಿ ಇರಲಿ. ಶರೀರ, ಇಂದ್ರಿಯ-ಮೊದಲಾದ ಸಾಧನಗಳಿಲ್ಲದ ಬ್ರಹ್ಮವು ಹೇಗೆ ಜಗತ್ತಿನ ರೂಪವನ್ನು ತಾಳೀತು? —೩೧

ಸಿ— ಹಾಲು ಶರೀರೇಂದ್ರಿಯಗಳಿಲ್ಲದ್ದಾದರೂ ಹೆಪ್ಪಿನ ಸೋಂಕಿನಿಂದ ಮೊಸರಾಗಿಪರಿಣಮಿಸುವಂತೆ ಬ್ರಹ್ಮವು ಶರೀರೇಂದ್ರಿಯಗಳಿಲ್ಲದ್ದಾದರೂ ಮಾಯೆಯ ಸೋಂಕಿನಿಂದ ಜಗತ್ತಿನ ಆಕಾರವನ್ನು ತಾಳುತ್ತದೆ.—೩೧

೧೧ ಜಗತ್ತಿನರಚನೆಯಿಂದ ಬ್ರಹ್ಮಕ್ಕೆ ಪ್ರಯೋಜನವಾಗಬೇಕಾದದ್ದಿಲ್ಲ (೩೨....೩೩)

ಪೂ— ಜಗತ್ತನ್ನು ಮಾಡುವದರಿಂದ ಬ್ರಹ್ಮಕ್ಕೇನೂ ಪ್ರಯೋಜನವಿಲ್ಲವಾದ್ದರಿಂದ ಅದು ಜಗತ್ತನ್ನು ಮಾಡಿರಲಾರದು. ಮಡಿಕೆಯನ್ನು ಮಾಡುವ ಕುಂಬಾರನಿಗೆ ಫಲವಿರುತ್ತದೆ. ಎಲ್ಲ ಬಯಕೆಗಳನ್ನೂ ತೀರಿಸಿಕೊಂಡು ಆನಂದದ ಮುದ್ದೆಯಾಗಿರುವ ಬ್ರಹ್ಮಕ್ಕೆ ಜಗತ್ತನ್ನು ಮಾಡುವದರಿಂದ ಏನು ಪ್ರಯೋಜನ? —೩೨

ಸಿ— ಲೋಕದಲ್ಲಿ ಬೇಕಾದಷ್ಟು ಐಶ್ವರ್ಯವಿರುವ ರಾಜರು ಒಮ್ಮೆ ಬರೀ ಕುತೂಹಲಕ್ಕಾಗಿ ಏನನ್ನಾದರೂ ಮಾಡುತ್ತಲೂ ಒಮ್ಮೆ ಸುಮ್ಮನಿರುತ್ತಲೂ ಇರುವಂತೆ ಎಲ್ಲ ಬಯಕೆಗಳನ್ನೂ ತೀರಿಸಿಕೊಂಡಿರುವ ಬ್ರಹ್ಮವು ಕುತೂಹಲದಿಂದ ಸೃಷ್ಟಿಕಾಲದಲ್ಲಿ ಪ್ರಪಂಚವನ್ನು ಹೊರಗೆಡಹುತ್ತಲೂ ಪ್ರಲಯಕಾಲದಲ್ಲಿ ಸುಮ್ಮನಿರುತ್ತಲೂ ಇರುವದು —೩೩

೧೨ ಬ್ರಹ್ಮದ ಮೇಲೆ ಪಕ್ಷಪಾತ ಮೊದಲಾದ ದೋಷಗಳೇರುವದಿಲ್ಲ (೩೪....೩೬)

**ಪೂ**— ಈಶ್ವರನು ಕೆಲವರನ್ನು ದರಿದ್ರರನ್ನಾಗಿಯೂ ಕೆಲವರನ್ನು ಐಶ್ವರ್ಯವಂತರನ್ನಾಗಿಯೂ ಮಾಡಿರುವದರಲ್ಲಿ ಅವನ ಪಕ್ಷಪಾತ ಮೊದಲಾದ ದೋಷಗಳು ಕಾಣುವವಲ್ಲ !

**ಸಿ**— ಈಶ್ವರನಲ್ಲಿ ಪಕ್ಷಪಾತವೂ ಇಲ್ಲ; ನಿರವಯತ್ವವೂ ಇಲ್ಲ. ಅವನು ಬಡವರನ್ನೂ ಭಾಗ್ಯವಂತರನ್ನೂ ಅವರವರ ಕರ್ಮಕ್ಕೆ ತಕ್ಕಂತೆ ಮಾಡಿರುವನು. —೩೪

**ಪೂ**— ಸೃಷ್ಟಿಯಾದಮೇಲೆ ಹುಟ್ಟುವವರಿಗೆ ಅವರವರ ಕರ್ಮಗಳಿರಬಹುದು. ಮೊದಲನೆ ಸೃಷ್ಟಿಯಲ್ಲಿ ಹೇಗೆ? ಆಗ ಯಾವ ಕರ್ಮಗಳೂ ಇರುವದಿಲ್ಲ! ಪ್ರಲಯದಲ್ಲಿ ಪ್ರಪಂಚವೆಲ್ಲ ಲಯವಾದಾಗ ಕರ್ಮಗಳೂ ಲಯವಾಗುತ್ತವೆ.

**ಸಿ**—ಮೊದಲನೆಸೃಷ್ಟಿಯೆಂಬುದೇ ಇಲ್ಲ. ಸೃಷ್ಟಿಯೆಂಬುದು ಅನಾದಿ. ಪ್ರಲಯದಲ್ಲಿ ಕರ್ಮಗಳೂ ಸಂಸ್ಕಾರದ ರೂಪದಲ್ಲಿ ಉಳಿದುಕೊಂಡಿರುವವು. ಆದ್ದರಿಂದ ಈಶ್ವರನ ಸೃಷ್ಟಿವೈಚಿತ್ರ್ಯಕ್ಕೆ ಪ್ರಾಣಿಗಳ ಕರ್ಮಗಳೇಕಾರಣ. –೩೫

**ಪೂ**— ಸೃಷ್ಟಿಪ್ರಲಯಗಳ ಸಾಲು ಅನಾದಿಯೆಂದೂ ಪ್ರಲಯದಲ್ಲಿ ಸಂಸ್ಕಾರದ ರೂಪದಲ್ಲಿದ್ದು ಮತ್ತೆ ಮತ್ತೆ ಹುಟ್ಟುವದೆಂದೂ ಹೇಳುವ ಮಾತು ಯುಕ್ತಿಗೆ ಹೇಗೆ ಹೊಂದುತ್ತದೆ ?

**ಸಿ**— ಬ್ರಹ್ಮವು ಹಿಂದಿನಂತೆ ಸೃಷ್ಟಿಸಿತೆಂಬ ಮುಂತಾದ ಶ್ರುತಿಯಿಂದ ಸೃಷ್ಟಿಯು ಅನಾದಿಯೆಂಬರ್ಥವು ಹೊರಬೀಳುವದು. ಆದ್ದರಿಂದ ಜೀವರ ಕರ್ಮಕ್ಕೆ ತಕ್ಕಂತೆ ವಿಚಿತ್ರಸೃಷ್ಟಿಯು ಹೊಂದುತ್ತದೆ. —೩೬

೧೩ ಮಾಯಿಕವಾದ ಗುಣಗಳಿಂದ ಕೂಡಿದ ಬ್ರಹ್ಮವು ಜಗತ್ತಾಗಬಹುದು (೩೭)

**ಪೂ**— ನಿರ್ಗುಣವಾದ ಬ್ರಹ್ಮಕ್ಕೆ ಎಲ್ಲವನ್ನೂ ತಿಳಿದಿರುವದು, ಎಲ್ಲವನ್ನೂ ಆಳುವದು-ಮೊದಲಾದ ಧರ್ಮಗಳಿರುವ ಸಂಭವವಿಲ್ಲವಾದ್ದರಿಂದ ಅದು ಜಗತ್ತನ್ನು ಹುಟ್ಟಿಸಿರಲಾರದಲ್ಲವೆ ?

**ಸಿ**— ಮಾಯಿಕವಾದ ಗುಣಗಳಿಂದ ಕೂಡಿದ ಬ್ರಹ್ಮಕ್ಕೆ ಎಲ್ಲವನ್ನೂ ತಿಳಿದಿರುವದೂ, ಎಲ್ಲವನ್ನೂ ಆಳುವುದೂ-ಮೊದಲಾದ ಧರ್ಮಗಳುಂಟು. ಆದ್ದರಿಂದ ಬ್ರಹ್ಮದಿಂದ ಜಗತ್ತಾಗಬಹುದು. —೩೭

## ಪಾದ ೨

### ಸಾಂಖ್ಯರೇ ಮೊದಲಾದವರ ಹುಳಕನ್ನು ತೋರಿಸುವದು

೧ ಪ್ರಧಾನದಿಂದ ಜಗತ್ತಿನ ರಚನೆಯಾಗಲಾರದು (೧...೧೦)

**ಪೂ**— ಸಾಂಖ್ಯರು ಹೇಳುವದೇನೆಂದರೆ:-ಗಡಿಗೆಯಲ್ಲೆಲ್ಲ ಮಣ್ಣು ವ್ಯಾಪಿಸಿ ಕೊಂಡಿರುವಂತೆ ಜಗತ್ತಿನಲ್ಲೆಲ್ಲ ಸುಖದುಃಖಮೋಹಗಳು ವ್ಯಾಪಿಸಿ ಕೊಂಡಿವೆ. ಸುಖದುಃಖಮೋಹಸ್ವರೂಪಗಳಾದ ಸತ್ತ್ವರಜಸ್ತಮೋ ಗುಣಗಳೇ ಪ್ರಧಾನ. ಅದು ಜಡ. ಚೇತನನ ಇಷ್ಟವನ್ನು ಸಾಧಿಸುವದ ಕ್ಕಾಗಿ ತಾನು ವಿಚಿತ್ರವಾದ ಜಗತ್ತಾಗುತ್ತದೆ. ಇದರಲ್ಲೇನು ದೋಷ?

ಸಿ—ಜಡವಾದ ಪ್ರಧಾನಕ್ಕೆ ಜಗತ್ತನ್ನು ಹುಟ್ಟಿಸುವ ಅನುಕೂಲತೆ ಗಳಿಲ್ಲ. —೧

,, ಜಡವಾದ ಪ್ರಧಾನವು ಪ್ರಪಂಚವಾಗುವದಕ್ಕೆ ಪ್ರಯತ್ನಿಸಿತೆಂಬ ಮಾತೇ ಒಪ್ಪುವದಿಲ್ಲ. ಜಡವಾದ ಪ್ರಧಾನಕ್ಕೆ ಪ್ರಪಂಚವನ್ನು ಹುಟ್ಟಿ ಸುವ ಇಚ್ಛೆ ಹೇಗೆ ಉಂಟಾದೀತು? —೨

**ಪೂ**— ಮೊಲೆಯಲ್ಲಿರುವ ಹಾಲು ತಾನೆ ಸ್ವತಂತ್ರವಾಗಿ ಉಕ್ಕಿಬರುವಂತೆ ಮತ್ತು ನದಿಯಲ್ಲಿ ನೀರು ಸ್ವತಂತ್ರವಾಗಿ ಮುಂದುವರಿಯುವಂತೆ ಜಡ ವಾದ ಪ್ರಧಾನವು ಸ್ವತಂತ್ರವಾಗಿ ಮಹತ್ತು ಮತ್ತು ಅಹಂಕಾರ ಮೊದ ಲಾದ ಜಗತ್ತಾಗುವದೆಂದರೆ ಏಕಾಗಬಾರದು? —೩

ಸಿ— ಆ ಹಾಲು ಮತ್ತು ನೀರು ಕೂಡ ಈಶ್ವರನಿಂದ ಪ್ರೇರಿತಗಳಾಗಿರು ವವೆ ಹೊರತು ಅವಕ್ಕೆ ಸ್ವಾತಂತ್ರ್ಯವಿಲ್ಲ. —೩

,, ಸಾಂಖ್ಯರ ಮತದಲ್ಲಿ ಪ್ರಧಾನಕ್ಕಿಂತಬೇರೆಯಾಗಿ ಅದನ್ನು ಪ್ರೇರಿ ಸುವ ಬ್ರಹ್ಮನು ಇಲ್ಲ. ಅಂಥ ಪ್ರೇರಕನೊಬ್ಬನಿಲ್ಲದ್ದರಿಂದ ಪ್ರಧಾನ ದಿಂದ ಯಾವಾಗಲೂ ಪ್ರಪಂಚದ ಸೃಷ್ಟಿಯೇ ಆಗುತ್ತಿರಬೇಕಾದೀತು. ಮತ್ತು ಪ್ರಲಯವೆಂಬುದು ಎಂದೂ ಇಲ್ಲದೆ ಹೋದೀತು. ಬ್ರಹ್ಮಕ್ಕೆ ಕಾಲದ ಅರಿವು ಇರುವದರಿಂದ ಒಮ್ಮೆ ಸೃಷ್ಟಿಯೂ ಒಮ್ಮೆ ಸುಮ್ಮನಿರುವಿ ಕೆಯೂ ಸಲ್ಲುವದು. ಜಡವಾದ ಪ್ರಧಾನಕ್ಕೆ ಕಾಲದ ಅರಿವು ಇಲ್ಲದ್ದ

ರಿಂದ ಕುರುಡನ ಸಂಧ್ಯಾವಂದನೆಯಂತೆ ಯಾವಾಗಲೂ ಪ್ರಪಂಚವು ಹುಟ್ಟುತ್ತಲೇ ಇರಬೇಕಾದೀತು. —೪

ಪೂ— ಆಕಳು ತಿಂದ ಹುಲ್ಲು ಹಾಲಾಗಿ ತಾನೆ ರೂಪಗೊಳ್ಳುವದು. ಹೀಗೆ ಪ್ರಧಾನವು ತಾನೆ ಪ್ರಪಂಚವಾಗುವದು.

ಸಿ— ಅದು ಸಲ್ಲದು. ಹುಲ್ಲಿಗೆ ಸ್ವತಂತ್ರವಾಗಿ ಇನ್ನೊಂದು ರೂಪಾಗುವ ಸ್ವಾತಂತ್ರ್ಯವಿಲ್ಲ. ಹೇಗೆಂದರೆ ಅದೇ ಹುಲ್ಲನ್ನ ಎತ್ತು ತಿಂದರೆ ಹಾಲಾಗುವದಿಲ್ಲ. ಹುಲ್ಲಿಗೆ ತಾನೆ ಹಾಲಾಗುವ ಯೋಗ್ಯತೆ ಇದ್ದರೆ ಎಲ್ಲ. ಪಶುಗಳ ಹೊಟ್ಟೆಯಲ್ಲಿಯೂ ಹಾಲಾಗಬೇಕಾದೀತು. ಹಾಗಾಗುವದಿಲ್ಲ. ಆದ್ದರಿಂದ ಈಶ್ವರನ ಪ್ರೇರಣೆಯಿಂದಲೇ ಹುಲ್ಲು ಹಾಲಾಗುವದೆಂದು ತಿಳಿಯಬೇಕು. —೫

,, ಜಡವಾದದ್ದು ತಾನೆ ರೂಪಾಂತರವಾಗುವದೆಂದು ಒಪ್ಪಿಕೊಂಡರೂ ಪ್ರಪಂಚವನ್ನು ಮಾಡುವದರಿಂದ ಪ್ರಧಾನಕ್ಕೆ ಪ್ರಯೋಜನವಿಲ್ಲ. ಪ್ರಧಾನಕ್ಕೆ ಭೋಗವಾಗಲಿ ಮೋಕ್ಷವಾಗಲಿ ಎರಡೂ ಇಲ್ಲ. ಜಗತ್ತಿನ ರಚನೆಯಿಂದ ಬ್ರಹ್ಮಕ್ಕೂ ಪ್ರಯೋಜನವಿಲ್ಲವಾದರೂ ಅದೊಂದು ಆಟವಾಗಿ ಅದು ಮಾಡಬಹುದು. ಜಡವಾದ ಪ್ರಧಾನಕ್ಕೆ ಆಟವೆಲ್ಲಿಯದು ? —೬

ಪೂ— ಚೈತನ್ಯದ ಸನ್ನಿಧಿಯ ಬಲದಿಂದ ಇಂದ್ರಿಯಗಳು ವಿಷಯಗಳಲ್ಲಿ ಮುಂದುವರಿಯುವಂತೆ ಮತ್ತು ಶರೀರಕ್ಕೆ ಚುಚ್ಚಿಕೊಂಡಿರುವ ಅಲಗು ಸೂಜಿಕಲ್ಲಿನ ಸನ್ನಿಧಿಯ ಬಲದಿಂದ ಹೊರಕ್ಕೆ ಬರುವಂತೆ ಬ್ರಹ್ಮದ ಸನ್ನಿಧಿಯ ಬಲದಿಂದ ಪ್ರಧಾನವು ಪ್ರಪಂಚವಾಗುವದೆನ್ನುತ್ತೇವೆ. —೭

ಸಿ— ಚೈತನ್ಯದ ಸನ್ನಿಧಿಯು ಯಾವಾಗಲೂ ಇರುವದರಿಂದ ಪ್ರಧಾನವು ಯಾವಾಗಲೂ ಪ್ರಪಂಚವಾಗುತ್ತಿರಬೇಕಾದೀತು. —೭

,, ಪ್ರಲಯಕಾಲದಲ್ಲಿ ಸತ್ತ್ವರಜಸ್ತಮೋಗುಣಗಳು ತಮೋಗುಣದ ಆಳಿಕೆಯೊಳಗಿರುವವಷ್ಟೆ. ಈಶ್ವರಪ್ರೇರಣೆ ಇಲ್ಲದೆ ಅವು ಬೇರೆಬೇರೆ ಗುಣಗಳ ಆಳಿಕೆಯುಳ್ಳವುಗಳಾಗಲಾರವು. ಆದ್ದರಿಂದ ಅವು ಬೇರೆ ಬೇರೆ ಸೃಷ್ಟಿಯನ್ನು ಮಾಡಲಾರವು. ಸಾತ್ತ್ವಿಕಸೃಷ್ಟಿಯಾಗುವಾಗ

ಸತ್ತ್ವಗುಣದ ಆಳಿಕೆ ಇರಬೇಕು. ರಾಜಸಸೃಷ್ಟಿಯಾಗುವಾಗ ರಜೋಗುಣದ ಆಳಿಕೆ ಇರಬೇಕು. ತಾಮಸಸೃಷ್ಟಿಯಾಗುವಾಗ ತಮೋಗುಣದ ಆಳಿಕೆ ಇರಬೇಕು. —೮

,, ಪ್ರಧಾನವು ಬೇರೆಬೇರೆ ಕಾಲದಲ್ಲಿ ಬೇರೆಬೇರೆ ಆಳಿಕೆಯುಳ್ಳದ್ದಾಗುವ ಸ್ವಭಾವದ್ದೆಂದರೆ ಜಡಕ್ಕೆ ಆ ಮಾತು ಹೇಗೆ ಒಪ್ಪೀತು ? ಜಡಕ್ಕೆ ತಿಳಿಯುವ ಶಕ್ತಿ ಇಲ್ಲ. ಅದಕ್ಕೆ ಬೇರೆಬೇರೆ ಕಾಲಗಳ ಅರಿವಿಲ್ಲದ್ದರಿಂದ ಅದು ಸುಮ್ಮನೆ ಏನೋ ಒಂದು ಬಗೆಯ ಸೃಷ್ಟಿಯನ್ನೇ ಮಾಡುತ್ತಿರಬೇಕಾಗುತ್ತಿತ್ತು. —೯

,, ಉಪನಿಷದ್ವಾಕ್ಯಗಳಿಗೆಲ್ಲ ಇದು ವಿರುದ್ಧವಾದ ಮಾತಾದ್ದರಿಂದ ಸಾಂಖ್ಯರ ಮತವು ಸರಿಯಲ್ಲ. —೧೦

೨ ಗಿಡ್ಡಾದ ಚಿಕ್ಕವುಗಳಿಂದ ಉದ್ದವಾದ ದೊಡ್ಡವುಗಳೇರ್ಪಡುವಂತೆ ಬ್ರಹ್ಮದಿಂದ ಜಗತ್ತಾಗಬಹುದು (೧೧)

**ಪೂ**— ವೈಶೇಷಿಕರೆನ್ನುವದೇನೆಂದರೆ :- ಕಾರಣದ ಗುಣಗಳು ಕಾರ್ಯದಲ್ಲಿ ಇಳಿದು ಬರಬೇಕು. ಜ್ಞಾನಾನಂದರೂಪವಾದ ಬ್ರಹ್ಮವು ಜಗತ್ತಿಗೆ ಕಾರಣವಾಗಿದ್ದ ಪಕ್ಷದಲ್ಲಿ ಜಗತ್ತಿನಲ್ಲೆಲ್ಲ ಜ್ಞಾನಾನಂದಗಳೇ ತೋರಬೇಕಾಗಿತ್ತು. ಹಾಗಿಲ್ಲ. ಆದ್ದರಿಂದ ಜಗತ್ತಿಗೆ ಬ್ರಹ್ಮವು ಕಾರಣವಲ್ಲ.

**ಸಿ**— ಒಳ್ಳೇದು. ಅವರ ಸಿದ್ಧಾಂತವನ್ನು ಹಿಡಿದೇ ಅವರಿಗೆ ಉತ್ತರವನ್ನು ಹೇಳುತ್ತೇವೆ. ಗಿಡ್ಡಾದ ಚಿಕ್ಕವುಗಳು ಒಂದಕ್ಕೊಂದು ಸೇರಿ ಉದ್ದವಾಗಿರುವ ದೊಡ್ಡವುಗಳನ್ನು ಹುಟ್ಟಿಸುವವೆಂದು ಹೇಳುವ ಅವರು ಜ್ಞಾನಾನಂದಸ್ವರೂಪವಾದ ಬ್ರಹ್ಮದಿಂದ ಜಡದುಃಖಾತ್ಮಕವಾದ ಜಗತ್ತು ಆಗಿರುವದೆಂಬ ಮಾತಿಗೆ ಏಕೆ ಹಿಂದುಮುಂದು ನೋಡಬೇಕು ? —೧೧

**೩ ಪರಮಾಣುಗಳಿಂದ ಜಗತ್ತಾಗುವದಿಲ್ಲ (೧೨—೧೭)**

**ಸಿ**— ಪರಮಾಣುಗಳನ್ನು ಪ್ರೇರಿಸುವವನು ಈಶ್ವರನೋ ಜೀವನೋ ? ಯಾರನ್ನು ಹೇಳಿದರೂ ಅವರಿಬ್ಬರೂ ಅವಯವಗಳಿಲ್ಲದವರಾದ್ದರಿಂದ

ಅವರು ಪರಮಾಣುಗಳನ್ನು ಒಂದಕ್ಕೊಂದನ್ನು ಕೂಡಿಸುವವರಾಗ ಲಾರರು. ಪರಮಾಣುಗಳನ್ನು ಮುಟ್ಟುವ ಅವಯವಗಳಿಲ್ಲದ ಅವರು ಅವುಗಳನ್ನು ಪ್ರೇರಿಸುವದು ಹೇಗೆ? ಆದ್ದರಿಂದ ಪರಮಾಣುಗಳು ಒಂದಕ್ಕೊಂದು ಹತ್ತಿರಕ್ಕೆ ಬಂದು ಸೇರುವದಕ್ಕೇ ದಾರಿ ಇಲ್ಲ. ಪರ ಮಾಣುಗಳು ಜಡವಾದ್ದರಿಂದ ತಾವೇ ಬಂದು ಒಂದಕ್ಕೊಂದು ಕೂಡಿ ಕೊಳ್ಳಲಾರವು. ಆದ್ದರಿಂದ ಗಿಡ್ಡಾದ ಚಿಕ್ಕವುಗಳಿಂದ ಉದ್ದವಾದ ದೊಡ್ಡ ಜಗತ್ತಾಗುವ ಸಂಭವವಿಲ್ಲ. —೧೨

,, ಅವಯವವಾದ ನೂಲುಗಳು ಅವಯವಗಳುಳ್ಳ ಬಟ್ಟೆಯಲ್ಲಿ ಸಮವಾಯವೆಂಬ ಸಂಬಂಧದಿಂದ ಸೇರಿಕೊಂಡಿರುವದೆಂದು ನೈಯಾ ಯಿಕರು ಹೇಳುತ್ತಾರೆ. ನೂಲನ್ನು ಬೇರೆ ಮಾಡಿದರೆ ಬಟ್ಟೆಯೇ ಇಲ್ಲ ದಂತಾಗುವದರಿಂದ ಅದು ನಿತ್ಯಸಂಬಂಧವೆಂದು ಅವರ ಅಭಿಪ್ರಾಯ. ಇರಲಿ. ಸಮವಾಯವೆಂಬುವದು ಸಂಯೋಗದಂತೆ ಒಂದು ಬಗೆಯ ಸಂಬಂಧ. ಎರಡು ದ್ರವ್ಯಗಳೂ ಒಂದಕ್ಕೊಂದು ಸೇರಿದರೆ ಸಂಯೋಗ ಸಂಬಂಧ. ಬಟ್ಟೆಯಮೇಲೆ ಗಡಿಗೆಯನ್ನಿಟ್ಟಾಗ ಗಡಿಗೆಯು ಸಂಯೋಗ ಸಂಬಂಧದಿಂದ ಬಟ್ಟೆಯಲ್ಲಿ ಬಂತೆನ್ನುತ್ತಾರೆ. ಇಷ್ಟೇ ಅಲ್ಲದೆ ಬಟ್ಟೆ ಯಲ್ಲಿ ಆ ಸಂಯೋಗಸಂಬಂಧವು ಸಮವಾಯ ಸಂಬಂಧದಿಂದ ಬಂತೆ ನ್ನುತ್ತಾರೆ. ಹೀಗೆ ಸಂಯೋಗಕ್ಕೆ ಸಮವಾಯವೆಂಬ ಬೇರೆ ಸಂಬಂಧ ವನ್ನು ಹೇಳಿದಂತೆ ಸಂಯೋಗದಂತೆಯೇ ಒಂದು ಸಂಬಂಧವೆನಿಸಿದ ಸಮವಾಯಕ್ಕೂ ಬೇರೊಂದು ಸಂಬಂಧವನ್ನು ಹೇಳಬೇಕಾಗುತ್ತದೆ. ಆಮೇಲೆ ಅದಕ್ಕಿನ್ನೊಂದು ಸಂಬಂಧವು ಬೇಕಾಗುತ್ತದೆ. ಇದಕ್ಕೆ ನಿಲುಗಡೆಯೇ ಇಲ್ಲ. ಆದ್ದರಿಂದ ನೈಯಾಯಿಕರ ಮತವು ಅಸಂ ಗತ. —೧೩

,, ಪರಮಾಣುಗಳು ಯಾವಾಗಲೂ ಎಂದೆಂದಿಗೂ ಇರತಕ್ಕವುಗಳಾ ದ್ದರಿಂದ ಪ್ರಲಯದಲ್ಲಿಯೂ ಸೃಷ್ಟಿಯಾಗಬೇಕಾದೀತು. ಈಶ್ವರಪ್ರೇರ ಣೆಯಿಂದ ಅವು ಒಮ್ಮೊಮ್ಮೆ ಮಾತ್ರ ಜಗತ್ತಾಗುತ್ತಿರುವವೆಂದು ಹೇಳು ವದಕ್ಕೂ ದಾರಿ ಇಲ್ಲ. ಈಶ್ವರನೂ ನಿರವಯವ, ಪರಮಾಣುಗಳೂ

ನಿರವಯವ, ಆದ್ದರಿಂದ ಅವೆರಡಕ್ಕೂ ಸಂಯೋಗವಾಗುವ ಹಾಗೆಯೇ ಇಲ್ಲವೆಂದು ಹಿಂದೆಯೇ ಹೇಳಿದ್ದೇವೆ. —೧೪

ಸಿ— ನೈಯಾಯಿಕರು ನೆಲ, ನೀರು-ಮೊದಲಾದ ಪರಮಾಣುಗಳೆಲ್ಲ ಗಂಧ, ರಸ-ಮೊದಲಾದ ಗುಣಗಳಿಂದ ಕೂಡಿದವುಗಳೆಂದು ಒಪ್ಪುವರು. ರೂಪ ಮೊದಲಾದ ಗುಣಗಳುಳ್ಳ ಗಡಿಗೆ ಮೊದಲಾದವುಗಳೆಲ್ಲ ಅವಯವಗಳುಳ್ಳವುಗಳಾಗಿದ್ದು ಕೊನೆಗೆ ನಾಶವಾಗುವದು ಕಾಣಬರುವದರಿಂದ ಪರಮಾಣುಗಳು ಯಾವಾಗಲೂ ಇರತಕ್ಕವುಗಳಾಗಲಾರವು. —೧೫

,, ಪರಮಾಣುಗಳನ್ನು ಸಾವಯವವೆಂದರೂ ದೋಷವೆ; ನಿರವಯವವೆಂದರೂ ದೋಷವೆ. ಸಾವಯವವೆಂದರೆ ನಾಶವಾಗತಕ್ಕವುಗಳೆಂಬ ದೋಷ ಉಂಟಾಗುತ್ತದೆ. ನಿರವಯವವೆಂದರೆ ಒಂದಕ್ಕೊಂದು ಕೂಡಿಕೊಳ್ಳತಕ್ಕವುಗಳಲ್ಲವೆಂದಾಗುತ್ತದೆ. ಅಂತು ಪರಮಾಣುಗಳಿಂದ ಜಗತ್ತಾಗುವದೆಂಬ ನೈಯಾಯಿಕರ ಮಾತು ನಿಲ್ಲುವದಿಲ್ಲ. —೧೬

,, ಮನು ಮೊದಲಾದ ಹಿರಿಯರು ನೈಯಾಯಿಕರ ಅಭಿಪ್ರಾಯಗಳನ್ನು ಎಷ್ಟು ಮಾತ್ರವೂ ಒಪ್ಪಿಕೊಂಡಿಲ್ಲವಾದ್ದರಿಂದ ಅವರ ಮತವು ಸಂಪೂರ್ಣವಾಗಿ ಉಪೇಕ್ಷಿಸುವದಕ್ಕೆ ತಕ್ಕದ್ದು. —೧೭

೪ ಪರಮಾಣುಗಳ ಗುಂಪೆಂಬುದೇ ಹೊಂದುವದಿಲ್ಲ (೧೮ . .೨೭)

**ಪೂ**— ಅಣುಗಳು ಜಗತ್ತನ್ನು ಹುಟ್ಟಿಸುವವೆಂಬ ವೈಶೇಷಿಕರಿಗೆ **ಉತ್ತರ**ವನ್ನು ಹೇಳಿದಿರಿ. ಅಣುಗಳ ಗುಂಪೇ ಜಗತ್ತೆಂಬ ಬೌದ್ಧರಿಗೇನು ಹೇಳುತ್ತೀರಿ ? ಬೌದ್ಧರಲ್ಲಿ ಜ್ಞಾನವೂ ಅದಕ್ಕೆ ವಿಷಯವಾದ ವಿಷಯಗಳೂ ಎರಡೂ ಇರತಕ್ಕವುಗಳೆಂದೊಪ್ಪುವ ಒಂದು ಗುಂಪಿನವರು ಹೇಳುವದೇನೆಂದರೆ: ಗಂಧದ ಪರಮಾಣುಗಳ ಗುಂಪೇ ಪೃಥ್ವಿ. ರಸದ ಪರಮಾಣುಗಳ ಗುಂಪೇ ನೀರು. ರೂಪಪರಮಾಣುಗಳ ಗುಂಪೇ ತೇಜಸ್ಸು. ಸ್ಪರ್ಶಪರಮಾಣುಗಳ ಗುಂಪೇ ವಾಯು. ಈ ಭೂತಗಳೆ ಜೀವರ ಶರೀರಗಳೂ ಜಡಗಳ ಶರೀರಗಳೂ ಆಗಿರುವವು. ಆಕಾಶವೆಂದರೆ ಮೊಲದ ಕೊಂಬಿ

ನಂತೆ ಇಲ್ಲದ್ದು. ಜೀವರು ಉಪದ್ರವದಿಂದ ಕೂಡಿದ ಜ್ಞಾನಧಾರೆಯಾಗಿರುವರು. ಎಣ್ಣೆಯನ್ನು ಹೀರಿಕೊಂಡು ಉರಿಯುವ ಉರಿ ಗಳಿಗೆಗಳಿಗೆಗೂ ಹುಟ್ಟಿಹೋಗುತ್ತಿರುವಂತೆ ಭೇದವಾಗಿದ್ದುಕೊಂಡು ಕೊನೆಗೆ ಆರುವ ಹಾಗೆ ಜೀವರು ನಾಶವಾಗುವದು. ಇದಕ್ಕೇನು ಹೇಳುತ್ತೀರಿ?

ಸಿ— ಈಗ ನಾಲ್ಕು ಭೂತಗಳ ಹುಟ್ಟುವಿಕೆಯ ವಿಷಯವನ್ನು ತೆಗೆದುಕೊಳ್ಳೋಣ. ಪರಮಾಣುಗಳ ಗುಂಪೊಂದಿರುವದೆಂಬ ಮಾತೇ ನಿಲ್ಲುವದಿಲ್ಲ. ಏಕೆಂದರೆ ಅವರ ಮತದಲ್ಲಿ ಜೀವರೆಲ್ಲರೂ ಗಳಿಗೆಗಳಿಗೆಗೂ ಬೇರೆಯಾಗುವ ಜ್ಞಾನಧಾರಾರೂಪರಾದವರಾಗಿ ನೆಲೆಯಾಗಿರತಕ್ಕವರಲ್ಲದ್ದರಿಂದ ಕ್ಷಣಿಕಪರಮಾಣುಗಳನ್ನು ಕೂಡಿಹಾಕುವ ಕೆಲಸವು ಅವರಿಂದ ನಡೆಯುವದಿಲ್ಲ. —೧೮

ಪೂ— ಪರಮಾಣುಗಳನ್ನು ಕೂಡಿಹಾಕುವವರೊಬ್ಬರೇಕೆ ಬೇಕು? ಅವು ತಾವೆ ಒಂದಕ್ಕೊಂದು ಕೂಡಿಕೊಳ್ಳುವವು.

ಸಿ— ಮೊದಮೊದಲಿನ ಘಟದ ಪರಮಾಣುಗಳು ಮುಂದಮುಂದಿನ ಘಟಪರಮಾಣುಗಳನ್ನು ಹುಟ್ಟಿಸುವ ಮಾತ್ರಕ್ಕೆ ಕಾರಣವೆಂದು ಅವರ ಅಭಿಪ್ರಾಯ. ಆದ್ದರಿಂದ ಅವುಗಳನ್ನು ಕೂಡಿಸುವದಕ್ಕೆ ಯಾವಾಗಲೂ ನೆಲೆಯಾಗಿರುವ ಈಶ್ವರನೊಬ್ಬನು ಬೇಕು. ಜಡಗಳಾದ ಕ್ಷಣಿಕಪರಮಾಣುಗಳು ತಾವು ತಾವೆ ಕೂಡಿಕೊಳ್ಳಲಾರವು. —೧೯

,, ಮೊದಮೊದಲ ಪರಮಾಣಗಳು ಮುಂದಮುಂದಿನ ಪರಮಾಣುಗಳನ್ನು ಹುಟ್ಟಿಸುವವೆಂಬ ಮಾತು ಕೂಡ ಸಲ್ಲುವದಿಲ್ಲ. ಮುಂದಿನ ಪರಮಾಣುಗಳು ಹುಟ್ಟುವ ಹೊತ್ತಿಗೆ ಹಿಂದಿನ ಪರಮಾಣುಗಳೆಲ್ಲ ನಾಶವಾಗಿರುತ್ತವೆ. ಆದ್ದರಿಂದ ಅವು ಮುಂದಿನ ಪರಮಾಣುಗಳನ್ನು ಹುಟ್ಟಿಸುವದಾಗುವದಿಲ್ಲ. —೨೦

,, ಆ ಬೌದ್ಧನು ಕಾರ್ಯರೂಪವಾಗಿರುವ ಎಲ್ಲವಕ್ಕೂ ಕಾರಣರೂಪವು ಒಂದುಂಟೆಂದು ಒಪ್ಪುತ್ತಾನೊ ಇಲ್ಲವೊ? ಹೇಗೆ ಒಪ್ಪಿದರೂ ಅವನಿಗೆ ಅದು ಗಂಟಲಗಾಣವೆ. ಹೇಗೆಂದರೆ: ಕಾರಣರೂಪ ಉಂಟೆಂದರೆ ಕಾರಣವಿಲ್ಲದೆ ಕಾರ್ಯಗಳುಂಟಾಗುವವೆಂಬ ಅವನ ಸಿದ್ಧಾಂತಕ್ಕೆ ಹಾನಿ,

ಕಾರಣರೂಪವಿಲ್ಲವೆಂದರೆ ಕಾರ್ಯಕಾರಣಗಳೆರಡೂ ಒಂದೇ ಕಾಲದಲ್ಲಿದ್ದಂತಾಯಿತು. ಆಗ ಎಲ್ಲವೂ ಕ್ಷಣಿಕವೆಂಬ ಸಿದ್ಧಾಂತವು ಎದ್ದು ಹೋಗುವದು. —೨೧

ಸಿ— ಗಡಿಗೆಯನ್ನು ಯಾರೋ ಬುದ್ಧಿಪೂರ್ವಕವಾಗಿ ಒಡೆದದ್ದರಿಂದ ಅದಕ್ಕೆ ಉಂಟಾಗುವ ನಾಶದ ಬಗೆಯೊಂದು; ಕಾಲಕ್ರಮವಾಗಿ ಮಹಾಭೂತಗಳೆ ನಾಶವಾಗುವ ನಾಶದ ಬಗೆಯೊಂದು – ಹೀಗೆ ನಾಶದ ಬಗೆಗಳೆರಡೆಂದು ಆ ಬೌದ್ಧರ ಅಭಿಪ್ರಾಯ. ಅವರ ಮತದಲ್ಲಿ ಹಿಂದ ಹಿಂದಿನ ಪರಮಾಣುಗಳು ಸ್ವತಂತ್ರವಾಗಿ ಮುಂದಮುಂದಿನ ಪರಮಾಣುಗಳನ್ನು ಹುಟ್ಟಿಸುತ್ತವೆಂದು ನಿಯಮವಿದೆ. ಜಡವಾದ ಪರಮಾಣುಗಳಿಗೆ ಕಾಲವಿಶೇಷದ ಅರಿವಿಲ್ಲದ್ದರಿಂದ ಪರಮಾಣುಗಳ ಗುಂಪಿಗೆ ಎಂದಿಗೂ ನಿಲುಗಡೆಯೇ ಉಂಟಾಗುವದಿಲ್ಲ. ಆದ್ದರಿಂದ ಅವರ ಮತದಲ್ಲಿ ಸೃಷ್ಟಿಯೂ ಪ್ರಲಯವೂ ಎರಡೂ ಸಂಭವಿಸುವದಿಲ್ಲ. —೨೨

,, ಗಡಿಗೆ ಮೊದಲಾದ ಪರಮಾಣುಸಮುದಾಯಗಳಿಗೆ ಸ್ವಲ್ಪ ಹೊತ್ತಾದರೂ ಸ್ಥಿರತ್ವ ಉಂಟೊ ಅಥವಾ ಕ್ಷಣಿಕತ್ವವೊ? ಹೇಗೆ ಹೇಳಿದರೂ ದೋಷವು ಬಿಟ್ಟದ್ದಲ್ಲ. ಸ್ಥಿರತ್ವ ಉಂಟೆಂದರೆ ಅವರ ಸಿದ್ಧಾಂತವೇ ಹಾರಿ ಹೋಗುತ್ತದೆ. ಅವರು ಸ್ಥಿರಪದಾರ್ಥ ಉಂಟೆಂದು ಒಪ್ಪುವವರೇ ಅಲ್ಲ. ಕ್ಷಣಿಕತ್ವವೆಂದರೆ ಗಡಿಗೆಯಿಂದ ನೀರು ತರುವ ಕೆಲಸವು ನಡೆಯದೆ ಇರಬೇಕಾದೀತು. —೨೩

ಪೂ— ಬೌದ್ಧಮತದಲ್ಲಿ ಪರಮಾಣುಗಳಿಗೆ ಮಾತ್ರ ಕ್ಷಣಿಕತ್ವವೂ, ಪರಮಾಣುಗಳ ಗುಂಪಿನ ರೂಪವಾದ ಘಟಾದಿಗಳಿಗೆ ಸ್ಥಿರತ್ವವೂ ಉಂಟು. ಆದ್ದರಿಂದ ಗಡಿಗೆಯಿಂದ ನೀರು ತರುವದಕ್ಕಾಗುತ್ತದೆ.

ಸಿ— ಪರಮಾಣುಗಳಿಗಿಂತ ಪರಮಾಣುಗಳ ಗುಂಪನ್ನು ಬೇರೆಯೆಂದೊಪ್ಪಿದರೆ ಗಡಿಗೆ, ಬಟ್ಟೆ–ಮೊದಲಾದವುಗಳು ಅಣುಗಳ ಜೋಡಿ ಮೊದಲಾದ ಕ್ರಮದಿಂದ ಪರಮಾಣುಗಳಿಂದಲೆ ಹುಟ್ಟಿದಂತೆ ಒಪ್ಪಿಕೊಂಡಂತಾಗುತ್ತದೆ. ಇದರಿಂದ ನೈಯಾಯಿಕರ ಮತಕ್ಕೆ ಜಾರಿಬಿದ್ದವರಾಗುತ್ತಾರೆ. ಹೀಗೆ ಅವರ ಸಿದ್ಧಾಂತದಲ್ಲಿ ಹುರುಳಿಲ್ಲ. —೨೪

೩— ನಾಲ್ಕು ಭೂತಗಳೂ ಪರಮಾಣುಗಳ ಗುಂಪೆಂಬ ಮಾತಿನ ಹುಳಕನ್ನು ತೋರಿಸಿದ್ದಾಯಿತಷ್ಟೆ; ಇನ್ನು ಆಕಾಶವು ಮೊಲದ ಕೊಂಬಿನಂತೆ ಇಲ್ಲದ್ದೆಂಬ ಮಾತನ್ನು ಒರೆಗೆ ತಿಕ್ಕೋಣ. ಭೂತಚತುಷ್ಟಯಗಳಂತೆ ಆಕಾಶವೂ ಇರುವದೆಂದು ಎಲ್ಲ ಜೀವರೂ ತಿಳಿದಿರುವರು. ಆದ್ದರಿಂದ ಆ ನಾಲ್ಕು ಭೂತಗಳು ಕಣ್ಣಿಗೆ ಕಾಣುತ್ತ ಇರುವಂತೆ ಆಕಾಶವು ಕಣ್ಣಿಗೆ ಕಾಣದೆ ಇದ್ದರೂ ಅದೊಂದಿರುವದೆಂದು ಒಪ್ಪಲೇಬೇಕು. ಅದು ಇಲ್ಲದ್ದೆಂಬ ಮಾತು ಸಲ್ಲುವದಿಲ್ಲ. —೨೪

,, ಈಗ ಜೀವರೆಲ್ಲ ಕ್ಷಣಿಕಜ್ಞಾನಸಂತಾನರೂಪರೆಂಬ ಮಾತಿನ ಬಣ್ಣವನ್ನು ನೋಡೋಣ. ಹಿಂದಿನ ದಿನ ಅನುಭವಿಸಿದ ಪದಾರ್ಥಗಳು ಮುಂದಿನ ದಿನ ನೆನಪಿಗೆ ಬರುವದರಿಂದ ಜೀವರು ಎಡೆಬಿಡದೆ ಇರುವರೆಂದು ಒಪ್ಪಬೇಕು. ಅವರನ್ನು ಕ್ಷಣಿಕಜ್ಞಾನಸಂತಾನರೂಪರೆಂದರೆ ಹಿಂದಿನ ದಿನದ ಜ್ಞಾನಸಂತಾನಗಳು ಗಾಢನಿದ್ರೆಯಲ್ಲಿ ಅಳಿಸಿಹೋಗುವದರಿಂದ ಮರುದಿನ ಅವು ನೆನಪನ್ನು ತಂದುಕೊಡತಕ್ಕವುಗಳಾಗುವದಿಲ್ಲ. ಆ ಸಂದರ್ಭದಲ್ಲಿ ಮರುದಿನ ಹುಟ್ಟುವ ಜ್ಞಾನಸಂತಾನವೇ ನೆನಪನ್ನು ತಂದುಕೊಳ್ಳುವದೆಂದರೆ ಒಬ್ಬನು ಅನುಭವಿಸಿದ್ದನ್ನು ಇನ್ನೊಬ್ಬನು ನೆನಪಿಗೆ ತಂದುಕೊಳ್ಳುವನೆಂದಂತಾಗುತ್ತದೆ. ಅದು ಅಸಂಭವ. —೨೫

,, ಮುಂದಿನ ದಿನದ ಕ್ಷಣಿಕಜ್ಞಾನಸಂತಾನಗಳು ಹಿಂದಿನ ದಿನದ ಕ್ಷಣಿಕಜ್ಞಾನಸಂತಾನಗಳಿಂದ ಹುಟ್ಟಬೇಕು. ಹಿಂದಿನ ದಿನದ ಕ್ಷಣಿಕಜ್ಞಾನಸಂತಾನಗಳೆಲ್ಲ ಗಾಢನಿದ್ರೆಯಲ್ಲಿ ತಮ್ಮನ್ನು ತಾವು ಕಳೆದುಕೊಳ್ಳುವದರಿಂದ ಅವುಗಳಿಂದ ಮುಂದಿನ ದಿನದ ಜ್ಞಾನಸಂತಾನಗಳು ಹುಟ್ಟುವದಕ್ಕೆ ದಾರಿ ಇಲ್ಲ. ಕಳೆದುಹೋದ ಮಣ್ಣುಮುದ್ದೆಯಿಂದ ಗಡಿಗೆ ಮೊದಲಾದವುಗಳು ಹುಟ್ಟಲಾರವು. —೨೬

,, ಅವು ಗಾಢನಿದ್ರೆಯಲ್ಲಿ ಕಳೆದುಹೋದರೂ ಮುಂದಿನವುಗಳನ್ನು ಹುಟ್ಟಿಸುವವೆಂದರೆ ಲೋಕದಲ್ಲಿ ಉದಾಸೀನರಾಗಿ ಏನೂ ಉದ್ಯೋಗವನ್ನು ಮಾಡದಿರುವ ಜೀವರಿಗೂ ಅವರ ಇಷ್ಟಾರ್ಥಗಳೆಲ್ಲ ನೆರವೇರಬೇಕಾದೀತು. —೨೭

೫ ಜಗತ್ತು ಜ್ಞಾನಕ್ಕಿಂತ ಬೇರೆಯಾಗಿ ಇಲ್ಲದ್ದೆನ್ನುವ ಮಾತೂ
ಸಲ್ಲುವದಿಲ್ಲ (೨೮....೩೨)

**ಪೂ—** ಬೌದ್ಧರಲ್ಲಿ ಕೆಲವರು ಮಾತುಗಳಿಂದ ಕರೆಸಿಕೊಳ್ಳುವ ವಸ್ತುಗಳೇ ಇಲ್ಲವೆನ್ನುವವರಿದ್ದಾರಲ್ಲ !

**ಸಿ—** ಅವರೇನು ಪ್ರಪಂಚವನ್ನು ಮೊಲದ ಕೊಂಬಿನಂತೆ ಇಲ್ಲವೆನ್ನುವವರೊ ? ಅಥವಾ ಕನಸಿನ ಜಗತ್ತಿನಂತೆ ಬರೀ ತೋರಿಕೆಯದೆನ್ನುವವರೊ ? ಮೊಲದ ಕೊಂಬಿನಂತೆ ಇಲ್ಲವೆನ್ನುವ ಮಾತು ಸರಿಯಲ್ಲ. ಏಕೆಂದರೆ ಎದುರಿಗೇ ಕಾಣುತ್ತಿದೆ. ಜಗತ್ತು ಮೊಲದ ಕೊಂಬಿನಂತೆ ಇಲ್ಲದ್ದಾದರೆ ಎದುರಿಗೆ ಕಾಣುತ್ತಿರಲಿಲ್ಲ. —೨೮

,, ಕನಸಿನ ಜಗತ್ತಿನಂಥದ್ದೆನ್ನುವದೂ ಸಲ್ಲುವದಿಲ್ಲ. ಕನಸಿನ ಜಗತ್ತಿನ ಹೋಲಿಕೆಯಿಂದ ಎಚ್ಚರದ ಜಗತ್ತನ್ನೂ ಬರೀ ತೋರಿಕೆಯದೆನ್ನುವದು ಸಾಹಸದ ಮಾತು. ಏಕೆಂದರೆ ಅವೆರಡಕ್ಕೂ ಭೇದವಿದೆ. ಕನಸಿನ ಜಗತ್ತು ಎಚ್ಚರವಾಗುತ್ತಲೆ ಕಾಣದೆ ಹೋಗುವದು ಅನುಭವದಲ್ಲಿದೆ. ಆದ್ದರಿಂದ ಅದನ್ನು ಬರೀ ತೋರಿಕೆಯದೆನ್ನಬಹುದು. ಎಚ್ಚರದ ಜಗತ್ತು ಹಾಗೆ ಕಾಣದೆ ಹೋದದ್ದು ಅನುಭವದಲ್ಲಿಲ್ಲ. ಆದ್ದರಿಂದ ಅದು ಬರೀ ತೋರಿಕೆಯದಾಗಲಾರದು. ಬ್ರಹ್ಮಜ್ಞಾನವಾದಾಗ ಅದು ಕಾಣದೆ ಹೋಗುವದುಂಟೆಂದು ಶ್ರುತಿ ಹೇಳಬಹುದು. ಬೌದ್ಧರು ಶ್ರುತಿಯನ್ನು ಒಪ್ಪುವವರಲ್ಲ. ಒಪ್ಪಿದರೆ ಅವರು ನಮ್ಮ ಮತಕ್ಕೆ ಬಂದವರಾಗುತ್ತಾರೆ. —೨೯

,, ಎಚ್ಚರದ ಜಗತ್ತು ಬರೀ ಕಾಣದೆ ಹೋಗುವಿಕೆ ಇಲ್ಲದ್ದರಿಂದ ಮಾತ್ರವೇ ಅಲ್ಲ ; ಅದಕ್ಕೆ ಆಧಾರವಿಲ್ಲದ್ದರಿಂದಲೂ ಅದು ತೋರಿಕೆಯದಲ್ಲ. ಬೌದ್ಧಮತದಲ್ಲಿ ಜಗತ್ತಿಗೊಂದಾಧಾರವಿಲ್ಲ. ಏಕೆಂದರೆ ಅದು ಕಾಣುವದಿಲ್ಲ. ಹೀಗೆ ಅವರಿಗೆ ಪಾರಮಾರ್ಥಿಕವಾದ ಆಧಾರವನ್ನು ತಿಳಿಸುವ ಪ್ರಮಾಣವೇ ಇಲ್ಲ. —೩೦

**ಪೂ—** ವೇದಾಂತವನ್ನೊಪ್ಪದ ಮಾತ್ರಕ್ಕೆ ಅವರಿಗೆ ಆಧಾರವನ್ನು ತಿಳಿಸುವ ಪ್ರಮಾಣವೇ ಇಲ್ಲವೆನ್ನಲಾಗುವದಿಲ್ಲ. ಎಲ್ಲ ಪದಾರ್ಥಗಳಿಗೂ ಜ್ಞಾನವು ಆಧಾರವೆಂದು ಅವರ ಅಭಿಪ್ರಾಯ.

ಸಿ— ಅವರ ಜ್ಞಾನವು ಪ್ರತಿಕ್ಷಣದಲ್ಲಿಯೂ ನಾಶವಾಗತಕ್ಕದ್ದು ಮತ್ತು ಅನೇಕವಾಗಿರತಕ್ಕದ್ದು. ಆದ್ದರಿಂದ ಅದು ಜಗತ್ತಿಗೆ ಆಧಾರವಾಗಲಾರದು. ಎಲ್ಲ ಜ್ಞಾನಗಳೂ ಒಂದೇ ಎಂದೂ ನೆಲೆಯಾಗಿರತಕ್ಕವುಗಳೆಂದೂ ಒಪ್ಪಿದರೆ ಅದೇ ನಮ್ಮ ಬ್ರಹ್ಮವಾದದ್ದರಿಂದ ಅವರು ನಮ್ಮಲ್ಲಿ ಬಂದು ಸೇರಿದಂತಾಗುವದು. —೩೧

,, ಇನ್ನು ಬೌದ್ಧರಲ್ಲಿ ಜ್ಞಾನವೂ ಪದಾರ್ಥಗಳೂ ಎಲ್ಲ ಶೂನ್ಯವೆನ್ನುವವರೂ ಉಂಟು. ಅವರ ಮತವಂತು ಶ್ರುತಿಸ್ಮೃತಿಗಳಿಗೂ ಎಲ್ಲ ಪ್ರಮಾಣಗಳಿಗೂ ವಿರುದ್ಧವಾದ್ದರಿಂದ ಅವರ ಮತವು ಹೊಂದಿಕೆಯಾದದ್ದಲ್ಲ. —೩೨

೬ ಒಂದರಲ್ಲಿಯೇ ವಿರುದ್ಧ ಧರ್ಮಗಳಿರುವದಿಲ್ಲ (೩೩ ...೩೬)

ಪೂ— ಜೈನರು ಜಗತ್ತಿಗೆ ಇರುವಿಕೆಯನ್ನೂ ಇಲ್ಲದಿರುವಿಕೆಯನ್ನೂ ಇರುವದೂ ಇಲ್ಲದ್ದೂ ಆಗಿರುವಿಕೆಯನ್ನೂ ಇರುವದೂ ಇಲ್ಲದ್ದೂ ಅಲ್ಲದ್ದೆಂಬುದನ್ನೂ ಹೇಳಿರುತ್ತಾರಲ್ಲ !

ಸಿ— ಅದು ಸರಿಯಲ್ಲ. ಒಂದೇ ವಸ್ತುವಿನಲ್ಲಿ ಹಾಗೆ ವಿರುದ್ಧಧರ್ಮಗಳಿರುವದಿಲ್ಲ. —೩೩

ಪೂ— ಜೈನರು ಜೀವನಿಗೆ ಶರೀರದಷ್ಟು ಪರಿಮಾಣ ಉಂಟೆಂದು ಹೇಳುತ್ತಾರಲ್ಲ !

ಸಿ— ಹಾಗಾದರೆ ಸೊಳ್ಳೆ ಮೊದಲಾದ ಶರೀರಗಳಲ್ಲಿರುವ ಜೀವರಿಗೆ ಅವರ ಕರ್ಮದಿಂದ ಆನೆಯ ಜನ್ಮ ದೊರೆತರೆ ಆಗ ಆ ಜೀವರು ಆನೆಯ ಮೈತುಂಬ ಹರಡಿಕೊಳ್ಳಲಾರದೆ ಇರಬೇಕಾದೀತು. ಏಕೆಂದರೆ ಆ ಜೀವರು ಬಹು ಸಣ್ಣವರಾಗಿರುತ್ತಾರೆ. ಆನೆ ಮೊದಲಾದ ಶರೀರಗಳಲ್ಲಿರುವ ದೊಡ್ಡ ಜೀವರಿಗೆ ಅವರ ಕರ್ಮದಿಂದ ಸೊಳ್ಳೆ ಮೊದಲಾದ ಸಣ್ಣ ಜನ್ಮಗಳು ಬಂದರೆ ಆಗ ಅವರು ಸೊಳ್ಳೆ ಮೊದಲಾದವುಗಳಲ್ಲಿಯೇ ಅಡಗದೆ ಇರಬೇಕಾದೀತು. —೩೪

ಪೂ— "ಜೀವರು ಹತ್ತಿಯ ಉಂಡೆಯಂತೆ ಅವಯವ ಉಳ್ಳವರು. ಆದ್ದರಿಂದ ಸೊಳ್ಳೆ ಮೊದಲಾದ ದೇಹಗಳು ಬಂದಾಗ ಅವರು ಸುಕ್ಕಿಕೊಳ್ಳು

ತ್ತಾರೆ; ಆನೆ ಮೊದಲಾದ ದೇಹಗಳು ಬಂದಾಗ ಅರಳಿಕೊಳ್ಳುತ್ತಾರೆ.” ಎಂದೇಕೆ ಹೇಳಬಾರದು? —೩೫

ಸಿ— ಹಾಗಾಗುವದಿಲ್ಲ. ಜೀವರು ಅವಯವ ಉಳ್ಳವರಾದರೆ ಬದಲಾವಣೆ ಯನ್ನು ಹೊಂದುತ್ತ ನಾಶವಾಗುವವರಾಗಬೇಕಾಗುತ್ತದೆ. —೩೫

ಪೂ— ಜೀವನು ಮೋಕ್ಷವನ್ನು ಹೊಂದುವಾಗಿನ ಪರಿಮಾಣವು ಒಂದೇ ರೀತಿ ಇರುತ್ತದೆ. ಮೊದಲೂ ನಡುವೆಯೂ ಅದೇ ಪರಿಮಾಣವೇ ಯಾವಾಗಲೂ ಇರುತ್ತದೆ. ಅವನು ಸುಕ್ಕಿಕೊಳ್ಳುವದೂ ಇಲ್ಲ; ಅರಳಿಕೊಳ್ಳುವದೂ ಇಲ್ಲ. ಆದ್ದರಿಂದ ಅವನಿಗೆ ನಾಶವಿಲ್ಲವೆಂದು ಅವರು ಅಭಿಪ್ರಾಯಪಟ್ಟರೆ? —೩೬

ಸಿ— ಹಾಗಾದರೆ ಸರಿ. ಅವರು ನಮ್ಮ ಮತಕ್ಕೆ ಶರಣುಬಂದಂ ತಾಯಿತು. —೩೬

೭ ಈಶ್ವರನು ಬರೀ ಹೊರಗಣ ಕಾರಣನಲ್ಲ (೩೭ .. ೪೧)

ಪೂ— ನೈಯಾಯಿಕರು, ವೈಶೇಷಿಕರು, ಶೈವರು–ಮೊದಲಾದವರು ಶ್ರುತಿ ಯನ್ನು ಹಿಡಿಯದೆ ಈಶ್ವರನು ಬರೀ ಹೊರಗಣ ಕಾರಣನೆನ್ನುವರು ಮೊಳಕೆ ಮೊದಲಾದವುಗಳು ಮೇಲಕ್ಕೆ ಎದ್ದರೆ ಅವುಗಳನ್ನು ಎಬ್ಬಿಸಿ ದವನೊಬ್ಬನಿರಬೇಕಾಗುತ್ತದೆ. ಏಕೆಂದರೆ ಅವು ಗಡಿಗೆ ಮೊದಲಾದ ವುಗಳಂತೆ ಕೆಲವು ಕ್ರಿಯೆಗಳಿಂದ ಮೇಲಕ್ಕೆದ್ದವುಗಳಾಗಿರುವವು. ಗಡಿಗೆಗೆ ಕುಂಬಾರನಿರುವಂತೆ ಮೊಳಕೆ ಮೊದಲಾದವುಗಳಿಗೆ ಈಶ್ವರ ನಿರಬೇಕು.

ಸಿ— ಈಶ್ವರನು ಬರೀ ಹೊರಗಣ ಕಾರಣನೆಂಬ ಮಾತಿಗೆ ಕಾಲಿಲ್ಲ. ಮೊಳಕೆಯ ದೃಷ್ಟಾಂತವು ಅದಕ್ಕೊಬ್ಬ ಕರ್ತನಿರುವನೆಂದು ಸೂಚಿಸು ವದೇ ಹೊರತು ಸರ್ವಜ್ಞನಾದ ಈಶ್ವರನಿರುವದಕ್ಕೆ ಪ್ರಮಾಣವಾಗ ಲಾರದು. —೩೭

,, ನೈಯಾಯಿಕರ ಮತದಲ್ಲಿ ಪರಮಾಣುಗಳೂ ನಿರವಯವ; ಈಶ್ವರನೂ ನಿರವಯವ. ಆದ್ದರಿಂದ ಅವರಿಬ್ಬರಿಗೂ ಸಂಯೋಗ ಸಂಬಂಧವಾಗುವ ಹಾಗೆಯೇ ಇಲ್ಲ. ಆದಕಾರಣ ಈಶ್ವರನು ಪರಮಾಣು

ಗಳನ್ನು ಪ್ರೇರಿಸುವವನಾಗಲಾರನು. ಹೀಗಿರುವಾಗ ಪರಮಾಣುಗಳಿಂದ ಜಗತ್ತು ಹುಟ್ಟುವದು ಹೇಗೆ? —೩೮

ಸಿ— ಇನ್ನೊಂದೇನೆಂದರೆ: ಅವರ ಮತದಲ್ಲಿ ಪರಮಾಣುಗಳು ಇಂದ್ರಿಯಗಳಿಗೆ ಕಾಣಬರತಕ್ಕವುಗಳಲ್ಲ. ಆದ್ದರಿಂದ ಈಶ್ವರನಿಗೆ ಪರಮಾಣುಗಳು ಕಾಣಬರುವ ಸಂಭವವಿಲ್ಲ. ಈಶ್ವರನು ಪರಮಾಣುಗಳನ್ನು ಪ್ರೇರಿಸುವವನೂ ಆಗುವದಿಲ್ಲ. ಆದ್ದರಿಂದ ಅವರ ಮತದಲ್ಲಿ ಜಗತ್ತು ಹುಟ್ಟುವದಕ್ಕೇ ದಾರಿ ಇಲ್ಲ. —೩೯

**ಪೂ**— ಪರಮಾಣುಗಳು ಜೀವರಿಗೆ ಕಾಣಬರಲಾರವೆ ಹೊರತು ಈಶ್ವರನಿಗೆ ಕಾಣಬರುವವೆಂದು ಹೇಳಿದರೆ?

ಸಿ— ಅದು ಆಗುವದಿಲ್ಲ. ಒಬ್ಬರಿಗೆ ಕಾಣಬರದ್ದು ಯಾರಿಗೂ ಕಾಣಬರುವದಿಲ್ಲ.

**ಪೂ**— ನಿಮ್ಮ ಬ್ರಹ್ಮಕ್ಕೆ ಹೇಗೆ?

ಸಿ— ಅದರ ಮಾತು ಬೇರೆ. ಅದಕ್ಕೆ ಶ್ರುತಿಯ ಬೆಂಬಲವಿದೆ. ಅದಕ್ಕೆ ಎಲ್ಲ ಜಗತ್ತಿನ ಸಾಕ್ಷಾತ್ಕಾರವೂ ಉಂಟು.

**ಪೂ**— ಜೀವರು ತಮಗೆ ಕಾಣಬರದೆ ಇರುವ ಇಂದ್ರಿಯಗಳನ್ನು ಪ್ರೇರಿಸುವಂತೆ ಈಶ್ವರನು ತನಗೆ ಕಾಣಬರದೆ ಇರುವ ಪರಮಾಣುಗಳನ್ನು ಪ್ರೇರಿಸುವನೆಂದಾಗಲಿ. —೪೦

ಸಿ— ಹಾಗಲ್ಲ. ವಿಷಯಗಳನ್ನು ಭೋಗಿಸುವದಕ್ಕಾಗಿ ಜೀವರು ಇಂದ್ರಿಯಗಳನ್ನು ಪ್ರೇರಿಸುವದು ಸರಿ. ಶರೀರವಿಲ್ಲದ ಈಶ್ವರನಿಗೆ ಪರಮಾಣುವಿನಿಂದ ಹುಟ್ಟಿದ ಜಗತ್ತಿನಿಂದ ಯಾವ ಭೋಗವೂ ಇಲ್ಲವಾದ್ದರಿಂದ ಆವನು ಪರಮಾಣುಗಳನ್ನು ಪ್ರೇರಿಸುವವನಲ್ಲ. —೪೦

,, ಇಷ್ಟೇ ಅಲ್ಲ. ಅವರು ಈಶ್ವರನನ್ನು ಸಾವಯವನೆನ್ನುತ್ತಾರೊ ನಿರವಯವನೆನ್ನುತ್ತಾರೊ? ಸಾವಯವನೆಂದರೆ ನಾಶವಾಗತಕ್ಕವನಾಗುತ್ತಾನೆ; ನಿರವಯವನೆಂದರೆ ಜಗತ್ತಿಗೂ ಈಶ್ವರನಿಗೂ ಸಂಯೋಗ ಸಂಬಂಧವಿಲ್ಲವಾದ್ದರಿಂದ ಅವನನ್ನು ಸರ್ವಜ್ಞನಲ್ಲವೆನ್ನಬೇಕಾಗುತ್ತದೆ. —೪೧

೮ ವಾಸುದೇವನಿಂದ ಜೀವನೆಂಬ ಮೊದಲಾದ ಕ್ರಮದಲ್ಲಿ ಹುಟ್ಟುವದಿಲ್ಲ (೪೨...೪೫)

**ಪೂ**— ಪಾಂಚರಾತ್ರರು ಬ್ರಹ್ಮದಿಂದ ಜೀವರು ಹುಟ್ಟಿದವರೆಂದೂ ಜೀವರಿಂದ ಅಂತಃಕರಣಗಳು ಹುಟ್ಟಿದವೆಂದೂ ಹೇಳುತ್ತಾರಲ್ಲ!

**ಸಿ**— ಬ್ರಹ್ಮದಿಂದ ಜೀವರು ಹುಟ್ಟಿದರೆಂಬ ಮಾತು ಹೊಂದುವದಿಲ್ಲ. ಜೀವರು ಬ್ರಹ್ಮದಿಂದ ಹುಟ್ಟಿದವರಾದರೆ ಪಂಚಮಹಾಭೂತಗಳಂತೆ ನಾಶವಾಗತಕ್ಕವರಾಗುವರೆ ಹೊರತು ಮೋಕ್ಷವನ್ನು ಪಡೆಯತಕ್ಕವರಾಗುವದಿಲ್ಲ. —೪೨

,, ಕರ್ತೃವಾದ ಜೀವನಿಂದ ಕರಣವಾದ ಅಂತಃಕರಣವೂ ಹುಟ್ಟುವದಿಲ್ಲ. ಅಜ್ಞನಾದ ಜೀವನಿಗೆ ಅಂತಃಕರಣವನ್ನು ಹುಟ್ಟಿಸುವ ಸಾಮರ್ಥ್ಯವೆಲ್ಲಿಯದು? ಅಂತಃಕರಣ ಮೊದಲಾದವು ನೇರವಾಗಿ ಬ್ರಹ್ಮದಿಂದಲೆ ಹುಟ್ಟಿದವೆಂದು ಶ್ರುತಿ ಇದೆ. —೪೩

,, ಜೀವರು ವಿಜ್ಞಾನಾನಂದರೂಪರೆಂದೂ ಯಾವಾಗಲೂ ಇರುವವರೆಂದೂ ಬ್ರಹ್ಮಕ್ಕಿಂತ ಬೇರೆಯಲ್ಲದವರೆಂದೂ ಅವರು ಹೇಳಿದರೆ ನಾವು ಅವರ ಮತವನ್ನು ತಿರಸ್ಕರಿಸುವದೇ ಇಲ್ಲ. ಅವರು ನಮ್ಮಲ್ಲಿ ಅಂತರ್ಭೂತರಾಗುತ್ತಾರೆ. —೪೪

,, ಜೀವರು ಹುಟ್ಟಿದರೆನ್ನುವದು ಎಲ್ಲ ಉಪನಿಷದ್ವಾಕ್ಯಗಳಿಗೂ ವಿರುದ್ಧವಾದ್ದರಿಂದ ಅದನ್ನು ಒಪ್ಪುವದಕ್ಕಾಗುವದಿಲ್ಲ. ಜೀವರಿಗೂ ಬ್ರಹ್ಮಕ್ಕೂ ಭೇದವಿಲ್ಲವೆಂದು ಅನೇಕಶ್ರುತಿಗಳು ಘಂಟಾಘೋಷವಾಗಿ ಹೇಳಿವೆ —೪೫

---

## ಪಾದ ೩

ಮಹಾಭೂತ ಮೊದಲಾದವುಗಳ ಹುಟ್ಟನ್ನು ಹೇಳುವ ಶ್ರುತಿಗಳಲ್ಲಿ ಒಂದಕ್ಕೊಂದಕ್ಕೆ ವಿರೋಧವಿಲ್ಲ.

---

೧ **ಆಕಾಶವು ಬ್ರಹ್ಮದಿಂದ ಹುಟ್ಟಿತು** (೧....೭)

**ಪೂ**— ಆಕಾಶಕ್ಕೆ ಹುಟ್ಟುವಿಕೆ ಇಲ್ಲ. ಏಕೆಂದರೆ ಛಾಂದೋಗ್ಯದಲ್ಲಿ ಮಹಾಭೂತಗಳು ಹುಟ್ಟಿದ್ದನ್ನು ಹೇಳುವಾಗ ಅದನ್ನು ಹಿಡಿದಿಲ್ಲ. —೧

ಸಿ— ತೈತ್ತಿರೀಯಶ್ರುತಿ ಅದನ್ನು ಹಿಡಿದು ಹೇಳಿರುವದಲ್ಲ! —೨

ಪೂ— ನಿರವಯವವಾದ ಆಕಾಶಕ್ಕೆ ಉತ್ಪತ್ತಿ ಹೊಂದುವದಿಲ್ಲವಾದ್ದರಿಂದ ಆ ಮಾತು ಗೌಣ. —೩

,, ಬ್ರಹ್ಮವು ಆಕಾಶದಂತೆ ನಿತ್ಯವಾದದ್ದೆಂದು ಶ್ರುತಿ ಇರುವದರಿಂದ ಆಕಾಶವು ನಿತ್ಯವೆಂದಾಯಿತು. ಅದಕ್ಕೆ ಹುಟ್ಟು ಹೊಂದುವದಿಲ್ಲ. —೪

,, ಶ್ರುತಿಯಲ್ಲಿ ಅನ್ನವನ್ನು ಬ್ರಹ್ಮವೆಂದು ಕರೆದಿರುವಾಗ ಆ ಬ್ರಹ್ಮವೆಂಬ ಮಾತು ಹೇಗೆ ಗೌಣವೊ ಹಾಗೆ ಆಕಾಶವು ಹುಟ್ಟಿತೆಂದಿರುವ ಶ್ರುತಿಯಲ್ಲಿ ಹುಟ್ಟಿತೆಂಬ ಮಾತು ಗೌಣ. —೫

ಸಿ— ಯಾವದನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಯಿತೊ ಅದು ಬ್ರಹ್ಮವೆಂದಿದೆಯಷ್ಟೆ. ಆದರಿಂದ ಬ್ರಹ್ಮವನ್ನು ತಿಳಿದರೆ ಆಕಾಶವನ್ನು ತಿಳಿದ ಹಾಗೆ ಆಗಲೇ ಬೇಕು. ಆದ್ದರಿಂದ ಆಕಾಶವು ಹುಟ್ಟಿರಬೇಕು. ಆಕಾಶವು ಯಾವಾಗಲೂ ಇರತಕ್ಕದ್ದಾದರೆ ಅದು ಬ್ರಹ್ಮಕ್ಕಿಂತ ಬೇರೆಯಾದದ್ದಾಗುತ್ತದೆ. ಆಗ ಬ್ರಹ್ಮವನ್ನು ತಿಳಿದರೆ ಎಲ್ಲವನ್ನೂ ತಿಳಿದ ಹಾಗೆ ಆಗುತ್ತೆಂಬ ಮಾತು ಹೋಗುತ್ತದೆ. —೬

,, ಬಗೆಬಗೆಯಾಗಿ ಕಾಣುವ ಜಗತ್ತೆಲ್ಲ ಲೋಕದಲ್ಲಿ ನೊರೆ, ಅಲೆ–ಮೊದಲಾದವುಗಳು ಸಮುದ್ರದಿಂದ ಹುಟ್ಟಿದಂತೆ ಬ್ರಹ್ಮದಿಂದ ಹುಟ್ಟಿದವುಗಳೆ. —೭

೨. ವಾಯು ಆಕಾಶದಿಂದ ಹುಟ್ಟಿತು (೮)

ಪೂ— ವಾಯು ಹುಟ್ಟಿತೆನ್ನುವದೂ ಛಾಂದೋಗ್ಯದಲ್ಲಿಲ್ಲದೆ ತೈತ್ತಿರೀಯದಲ್ಲಿರುವದರಿಂದ ಗೌಣವೆನ್ನಬೇಕಾಗುತ್ತದೆ.

ಸಿ— ಅದೂ ಆಕಾಶದಂತೆ ಹುಟ್ಟಿದ್ದು. —೮

೩ ಬ್ರಹ್ಮವು ಹುಟ್ಟಿದ್ದಲ್ಲ (೯)

ಪೂ— ಹಾಗಾದರೆ ಬ್ರಹ್ಮವೂ ಆಕಾಶದಂತೆ ಯಾವದರಿಂದಲೋ ಹುಟ್ಟಬೇಕಾಗುತ್ತದೆ.

ಸಿ— ಇರುವಿಕೆಯ ಸ್ವರೂಪವಾದ ಬ್ರಹ್ಮವು ಹುಟ್ಟಿತೆನ್ನುವದಕ್ಕೆ ಬರುವದಿಲ್ಲ. ಬ್ರಹ್ಮವನ್ನು ಹುಟ್ಟಿಸಿದ್ದೆನ್ನುವ ಇನ್ನೊಂದು ಇಲ್ಲ. —೯

೪ ಅಗ್ನಿಯು ವಾಯುವಿನಿಂದ ಹುಟ್ಟಿತು (೧೦)

**ಪೂ**— ಅಗ್ನಿಯು ವಾಯುವಿನಿಂದ ಹುಟ್ಟಿತೆಂದು ತೈತ್ತಿರೀಯದಲ್ಲಿದೆ; ಬ್ರಹ್ಮದಿಂದ ಹುಟ್ಟಿತೆಂದು ಛಾಂದೋಗ್ಯದಲ್ಲಿದೆ. ಇವೆರಡರಲ್ಲಿ ಯಾವದನ್ನು ಹಿಡಿಯಬೇಕು?

ಸಿ— ಅಗ್ನಿಯು ವಾಯುರೂಪವನ್ನು ಹೊಂದಿದ ಬ್ರಹ್ಮದಿಂದ ಹುಟ್ಟಿತೆನ್ನಬೇಕು. —೧೦

೫ ನೀರು ಅಗ್ನಿಯಿಂದ ಹುಟ್ಟಿತು (೧೧)

ಸಿ— ಅದರಂತೆ ನೀರು ಅಗ್ನಿಯ ರೂಪವನ್ನು ಹೊಂದಿದ ಬ್ರಹ್ಮದಿಂದ ಹುಟ್ಟಿತೆನ್ನಬೇಕು. —೧೧

೬ ಪೃಥ್ವಿಯು ನೀರಿನಿಂದ ಹುಟ್ಟಿತು (೧೨)

**ಪೂ**— ನೀರಿನಿಂದ ಅನ್ನವು ಹುಟ್ಟಿತೆಂದು ಶ್ರುತಿ ಇದೆ. ಅನ್ನವೆಂದರೆ ಧಾನ್ಯಗಳೊ ಭೂಮಿಯೊ?

ಸಿ— ನೀರಿನಿಂದ ಭೂಮಿ ಹುಟ್ಟಿತೆಂದರ್ಥ. ಏಕೆಂದರೆ ಅದು ಮಹಾಭೂತಗಳು ಹುಟ್ಟಿದವೆಂದು ಹೇಳುವ ಪ್ರಸಂಗದಲ್ಲಿ ಬಂದ ಮಾತು. ನೀರಿನಿಂದ ಅನ್ನವು ಹುಟ್ಟಿತೆಂದು ಒಂದುಕಡೆ ಇದ್ದರೂ ನೀರಿನಿಂದ ಪೃಥ್ವಿ ಹುಟ್ಟಿತೆಂದು ಸ್ಪಷ್ಟವಾಗಿ ಪೃಥ್ವಿಯ ಮಾತೇ ಬಂದಿದೆ. —೧೨

೭ ಆಕಾಶ ಮೊದಲಾದ ರೂಪವನ್ನು ಹೊಂದಿದ ಬ್ರಹ್ಮದಿಂದ ವಾಯು ಮೊದಲಾದವುಗಳು ಹುಟ್ಟಿದವು (೧೩)

**ಪೂ**— ಆಕಾಶವು ವಾಯುವನ್ನೂ ವಾಯು ಅಗ್ನಿಯನ್ನೂ ಹೀಗೆ ಭೂತಗಳೆ ಇನ್ನೊಂದು ಭೂತವನ್ನು ಹುಟ್ಟಿಸಿದವೆಂದೇಕೆ ಹೇಳಬಾರದು?

ಸಿ— ಇಂಥ ಭೂತವನ್ನು ಹುಟ್ಟಿಸಬೇಕೆಂಬ ಯೋಚನೆಯನ್ನು ತಂದುಕೊಂಡು ಮಾಡಬೇಕಾಗುವದರಿಂದ ಆಕಾಶದ ರೂಪವನ್ನು ಹೊಂದಿದ ಬ್ರಹ್ಮವು ವಾಯುವನ್ನೂ ವಾಯುವಿನ ರೂಪವಾದ ಬ್ರಹ್ಮವು ಅಗ್ನಿಯನ್ನೂ ಹೀಗೆ ಬೇರೆ ಬೇರೆ ಆಕಾರವನ್ನು ಹೊಂದಿದ ಬ್ರಹ್ಮವು ಬೇರೆ ಬೇರೆಯದನ್ನು ಹುಟ್ಟಿಸಿತೆನಬೇಕು. ಅಂತು ಎಲ್ಲ ಸೃಷ್ಟಿಯೂ ಬ್ರಹ್ಮದಿಂದಲೆ. ಬ್ರಹ್ಮವು ಭೂತಗಳೊಳಗಿದ್ದುಕೊಂಡು ವ್ಯವಹರಿಸುವದೆಂದು ಶ್ರುತಿಯೂ ಸ್ಪಷ್ಟವಾಗಿ ಹೇಳುತ್ತದೆ. —೧೩

೮ ಲಯದಲ್ಲಿ ಮುಂದಿನದು ಹಿಂದಿನದರಲ್ಲಿ ಸೇರುವದು (೧೪)

ಪೂ— ಲಯದ ಕ್ರಮವೂ ಸೃಷ್ಟಿಯ ಕ್ರಮದಂತೆಯೊ ಹೇಗೆ?

ಸಿ— ಲಯದಲ್ಲಿ ಸೃಷ್ಟಿಯ ವಿರುದ್ಧಕ್ರಮ. ಎಂದರೆ ಭೂಮಿಯು ನೀರಿನಲ್ಲಿ; ನೀರು ಅಗ್ನಿಯಲ್ಲಿ—ಹೀಗೆ. —೧೪

೯ ಭೂತಗಳಿಂದ ಅಂತಃಕರಣಗಳು ಹುಟ್ಟಿದವು (೧೫)

ಪೂ— ಒಂದು ಕಡೆ ಮೊದಲು ಅಂತಃಕರಣಗಳ ಉತ್ಪತ್ತಿಯನ್ನು ಹೇಳಿ ಆಮೇಲೆ ಭೂತಗಳ ಉತ್ಪತ್ತಿಯನ್ನು ಹೇಳಿದೆ. ಈ ಕ್ರಮಕ್ಕೇನು ಹೇಳುತ್ತೀರಿ? —೧೫

ಸಿ— ಅಲ್ಲಿ ಅಂತಃಕರಣಗಳು ಹುಟ್ಟಿದವೆಂದಿಷ್ಟೇ ತಾತ್ಪರ್ಯವನ್ನಿಟ್ಟುಕೊಳ್ಳಬೇಕೇ ಹೊರತು ಕ್ರಮವನ್ನು ತೆಗೆದುಕೊಳ್ಳಬಾರದು. ಪ್ರಾಣಗಳೂ ಇಂದ್ರಿಯಗಳೂ ಎಲ್ಲ ಭೂತಗಳಿಂದಾದವುಗಳು. ಆದ್ದರಿಂದ ಭೂತಗಳ ಉತ್ಪತ್ತಿಯಾದ ಮೇಲೆಯೇ ಅವುಗಳ ಉತ್ಪತ್ತಿ. —೧೫

೧೦ ಹುಟ್ಟುಸಾವುಗಳೆಲ್ಲ ದೇಹದ್ದು (೧೬)

ಪೂ— ದೇವದತ್ತನು ಹುಟ್ಟಿದನೆಂದೂ ಸತ್ತನೆಂದೂ ವ್ಯವಹಾರವಿದೆಯಲ್ಲ! ಇದರಿಂದ ಜೀವರನ್ನು ಹುಟ್ಟಿದರೆನ್ನಬೇಕಾಗುತ್ತದೆ. ಆದರೆ ಇವರ ಉತ್ಪತ್ತಿಯ ಮಾತು ಬರಲಿಲ್ಲವಲ್ಲ!

ಸಿ— ದೇವದತ್ತನು ಹುಟ್ಟಿದನೆಂಬ ಮತ್ತು ಸತ್ತನೆಂಬ ವ್ಯವಹಾರವೆಲ್ಲ ಅವನ ಶರೀರಕ್ಕೆ ಸಂಬಂಧಿಸಿದ ಮಾತು. ಬೆಂಕಿಯ ಸಂಬಂಧದಿಂದ ಧಗಧಗ ಉರಿಯುತ್ತಿರುವ ಕಬ್ಬಿಣದ ಗುಂಡನ್ನು ಬೆಂಕಿಯೆಂದೇ ತಪ್ಪು ತಿಳಿಯುವಂತೆ ಜೀವನ ಸಂಬಂಧದಿಂದ ಇರುವ ಶರೀರವನ್ನು ಜೀವನೆಂಬ ತಪ್ಪುತಿಳಿವಳಿಕೆಯು ಬಹುಕಾಲದಿಂದ ನಡೆದುಬಂದಿರುವದರಿಂದ ಹಾಗೆ ವ್ಯವಹಾರವಾಗುತ್ತಿದೆ. —೧೬

೧೧ ಜೀವನಿಗೆ ಸೃಷ್ಟಿಯ ಮೊದಲಲ್ಲಿಯೂ ಹುಟ್ಟುವಿಕೆ ಇಲ್ಲ (೧೭)

ಪೂ— ಮಹಾಭೂತಗಳಂತೆ ಜೀವನೂ ಏಕೆ ಹುಟ್ಟಿರಬಾರದು?

ಸಿ— ಶ್ರುತಿಯಲ್ಲಿ ಜೀವರ ಹುಟ್ಟಿನ ಮಾತೇ ಬಂದಿಲ್ಲ. ಇಷ್ಟೇ ಅಲ್ಲ.

ಅವನು ಆಕಾಶದಂತೆ ಯಾವಾಗಲೂ ಇರತಕ್ಕವನೆಂಬ ಮುಂತಾದ ಮಾತುಗಳಿವೆ. —೧೭

೧೨ ಜೀವರ ಚೈತನ್ಯವು ಯಾವಾಗಲೂ ಇರತಕ್ಕದ್ದು (೧೮)

**ಪೂ**— ಜೀವರ ಚೈತನ್ಯವನ್ನು ಕೆಲವರು ಬಂದುಹೋಗತಕ್ಕದ್ದೆನ್ನುವರು; ಕೆಲವರು ಯಾವಾಗಲೂ ಇರತಕ್ಕದ್ದೆನ್ನುವರು. ನಿಮ್ಮ ಅಭಿಪ್ರಾಯ ವೇನು?

ಸಿ— ಅವನು ಯಾವಾಗಲೂ ಇರತಕ್ಕವನಾದ್ದರಿಂದ ಅವನ ಚೈತನ್ಯವು ಯಾವಾಗಲೂ ಇರತಕ್ಕದ್ದು. —೧೮

೧೩ ಜೀವನು ಅಣುವಲ್ಲ (೧೯...೩೨)

**ಪೂ**— ಜೀವನು ದೇಹದಿಂದ ಹೊರಟು ಸ್ವರ್ಗಕ್ಕೋ ನರಕಕ್ಕೋ ಹೋಗುವದೂ ಅಲ್ಲಿ ಕಷ್ಟಸುಖಗಳನ್ನು ಅನುಭವಿಸಿ ಮರಳಿ ದೇಹಕ್ಕೆ ಬರುವದೂ ಕಾಣುವದರಿಂದ ಅವನಿಗೊಂದು ಪರಿಮಾಣವಿರಬೇಕು. ಅವನು ವ್ಯಾಪಕನಾಗಿದ್ದರೆ ಹೋಗುವದಕ್ಕೂ ಬರುವದಕ್ಕೂ ಆಗುತ್ತಿರಲಿಲ್ಲವಾದ್ದರಿಂದ ಅವನನ್ನು ಅಣುವೆಂದೇ ಹೇಳಬೇಕು. —೧೯

„ ಸೂಕ್ಷ್ಮದೇಹವು ಜೀವನೊಡನೆ ಸ್ವರ್ಗನರಕಲೋಕಗಳಿಗೆ ಹೋಗುವದೆಂದು ಹೇಳಬೇಕು. ಇಲ್ಲದಿದ್ದರೆ ಅಲ್ಲಿ ಕಷ್ಟಸುಖಗಳ ಅನುಭವವೇ ಆಗುವದಿಲ್ಲ. ಆದ್ದರಿಂದ ಜೀವನು ಅಣು. —೨೦

ಸಿ— ಜೀವನನ್ನು ಆಕಾಶದಂತೆ ಎಲ್ಲೆಲ್ಲಿಯೂ ತುಂಬಿರುವವನೆಂದೂ ಯಾವಾಗಲೂ ಇರುವವನೆಂದೂ ಶ್ರುತಿ ಹೇಳುತ್ತದೆಯಲ್ಲ! —೨೧

**ಪೂ**— ಹಾಗಲ್ಲ. ಅದು ಪರಮಾತ್ಮನ ವಿಷಯವನ್ನು ಹೇಳುವಾಗ ಆಡಿರುವ ಮಾತು. —೨೧

„ ಶ್ರುತಿಯಲ್ಲಿ ಅವನನ್ನು ಅಣುವೆಂದು ಹೇಳಿದೆ; ಕೂದಲ ಕೊನೆಯ ಅಳತೆಯವನೆಂದೂ ಹೇಳಿದೆ. ಆದ್ದರಿಂದ ಜೀವನು ಅಣು. —೨೨

ಸಿ— ಜೀವನು ಅಣುವಾದರೆ ಅವನು ಎಲ್ಲಿಯೋ ಒಂದು ಕಡೆ ಇರುವವನಾಗುತ್ತಾನೆ. ಅವನು ಶರೀರದಲ್ಲೆಲ್ಲ ಸುಖದುಃಖಗಳನ್ನುಂಟುಮಾಡುವ ಬಗೆ ಹೇಗೆ?

**ಪೂ**— ಅವಕ್ಕೆ ಅವಕಾಶ ಉಂಟು. ಶ್ರೀಗಂಧದ ಒಂದು ತೊಟ್ಟು ಶರೀರದ ಎಲ್ಲಿಯೋ ಒಂದು ಕಡೆ ಬಿದ್ದರೂ ಅದು ಶರೀರದಲ್ಲೆಲ್ಲ ತಣ್ಪು ನುಂಟುಮಾಡುವಂತೆ ಜೀವನು ಎಲ್ಲಿಯೋ ಒಂದು ಕಡೆ ಇದ್ದರೂ ಶರೀರದಲ್ಲೆಲ್ಲ ಸುಖದುಃಖಗಳನ್ನುಂಟುಮಾಡುವದಕ್ಕಾಗುತ್ತದೆ. —೨೩

**ಸಿ**— ಶ್ರೀಗಂಧದ ತೊಟ್ಟು ದೇಹದ ಒಂದುಕಡೆ ಇರುವದು ಕಣ್ಣಿಗೆ ಕಾಣು ತ್ತದೆ. ಹಾಗೆ ಜೀವನು ಎಲ್ಲಿಯೋ ಒಂದುಕಡೆ ಇರುವದು ಕಂಡುಬಂದಿ ಲ್ಲವಲ್ಲ ! —೨೪

**ಪೂ**— ಅವನು ಹೃದಯದಲ್ಲಿರುವನೆಂದು ಶ್ರುತಿಯೇ ಹೇಳಿದೆ.

,, ಅಥವಾ ಲೋಕದಲ್ಲಿ ದೀಪವು ಮನೆಯ ಒಂದುಕಡೆ ಇದ್ದರೂ ಅದರ ಬೆಳಕು ಮನೆಯಲ್ಲೆಲ್ಲ ಹರಡಿಕೊಂಡಿರುವಂತೆ ಜೀವನು ಹೃದಯ ವೆಂಬ ಒಂದುಕಡೆ ಇದ್ದರೂ ಅವನ ಗುಣಗಳಾದ ಸುಖದುಃಖಗಳು ಶರೀರದಲ್ಲೆಲ್ಲ ಕಾಣಿಸಿಕೊಳ್ಳುವದಕ್ಕಾಗುತ್ತದೆ. —೨೫

,, ಗಂಧವು ಹೂವಿನ ಜೊತೆ ಇಲ್ಲದೆಯೂ ಗಾಳಿಯ ಸೆಳೆತದಿಂದ ಬೇರೆ ಕಡೆಗೆ ಹೋಗುವಂತೆ ಸುಖದುಃಖಗಳು ಜೀವನ ಜೊತೆ ಇಲ್ಲ ದೆಯೂ ದೇಹದಲ್ಲೆಲ್ಲ ಹರಡಿಕೊಂಡು ಕಾಣಿಸಿಕೊಳ್ಳುವದಕ್ಕಾಗುತ್ತದೆ. —೨೬

,, ಜೀವನು ಹೃದಯದಲ್ಲಿರುವವನೆಂದೂ ಅಣುವೆಂದೂ ಹೇಳಿ ಅವನೆ ಕೂದಲ ತುದಿಯಿಂದ ಉಗುರ ತುದಿಯವರೆಗೂ ಚೈತನ್ಯವೆಂಬ ಗುಣದಿಂದ ಶರೀರದಲ್ಲೆಲ್ಲ ವ್ಯಾಪಿಸಿಕೊಂಡಿರುವನೆಂದು ಶ್ರುತಿ ಹೇಳಿದೆ. —೨೭

**ಸಿ**— ಜೀವನಿಗೂ ಬ್ರಹ್ಮಕ್ಕೂ ಭೇದವಿಲ್ಲದಿರುವಾಗ ಬ್ರಹ್ಮವು ಎಲ್ಲೆ ಲ್ಲಿಯೂ ತುಂಬಿರುವದಾದ ಮೇಲೆ ಜೀವನೂ ಎಲ್ಲೆಲ್ಲಿಯೂ ತುಂಬಿರು ವವನಾಗಬೇಕಲ್ಲವೆ?

**ಪೂ**— ಎರಡು ಹಕ್ಕಿಗಳ ಕಥೆಯನ್ನು ಹೇಳಿದಂತೆ ಹೇಳುವ ಶ್ರುತಿಯಲ್ಲಿ ಜೀವಬ್ರಹ್ಮರಿಗೆ ಭೇದವನ್ನೆ ಹೇಳಿರುವದರಿಂದ ಅವರಿಬ್ಬರಿಗೂ ಅಭೇದ ವೆಂಬುದಿಲ್ಲ. —೨೮

ಸಿ— ಜೀವನಿಗೆ ಅಣುಪರಿಮಾಣವನ್ನು ಹೇಳಿರುವ ಮಾತಿನ ಅರ್ಥವು ಬೇರೆ. ಅಣುಪರಿಮಾಣವೂ ನಾನು ಮಾಡುವವನೆಂಬ ಮತ್ತು ನಾನು ಅನುಭವಿಸುವವನೆಂಬ ಭಾವನೆಗಳೂ ಎಲ್ಲ ಅಂತಃಕರಣಕ್ಕೆ ಸೇರಿದವು ಗಳು. ಜೀವನು ಆ ಅಂತಃಕರಣದಿಂದ ಕೂಡಿದವನಾದ್ದರಿಂದ ಅವ ನನ್ನೂ ಅಣುವೆಂದು ಮುಂತಾಗಿ ಹೇಳಲಾಗಿರುವದು. ಪರಮಾತ್ಮನಿಗೆ ಕೂಡ ಉಪಾಸನೆಗಾಗಿ ಅಣುಪರಿಮಾಣವನ್ನೂ ಹೇಳುವದುಂಟು. ಜೀವ ನನ್ನು ಅಣುವೆಂದಿರುವದು ಇದರಂತೆ. —೨೯

ಪೂ— ಹಾಗಾದರೆ ಬುದ್ಧಿಯೂ ಜೀವನೂ ಬೇರೆಬೇರೆಯಾದ್ದರಿಂದ ಅವೆರ ಡಕ್ಕೂ ಯಾವಾಗಲಾದರೂ ಅಗಲಿಕೆಯುಂಟಾಗಲೇ ಬೇಕಷ್ಟೆ. ಬುದ್ಧಿ ಯು ಅಗಲುತ್ತಲೆ ಜೀವನು ಕಾಣಬರದವನಾಗಿ ಇಲ್ಲದವನೆಂದೋ ಅಥವಾ ಅಸಂಸಾರಿಯೆಂದೋ ಹೇಳಿಸಿಕೊಳ್ಳುತ್ತಾನಲ್ಲ!

ಸಿ— ಆತ್ಮಸಾಕ್ಷಾತ್ಕಾರವಾಗುವತನಕ ಅಂತಃಕರಣವಿದ್ದೇ ಇರುವದು. ಗಾಢನಿದ್ರೆಯಲ್ಲಿ ಅದು ಕಾಣದಿದ್ದರೂ ಸೂಕ್ಷ್ಮರೂಪದಿಂದ ಇದ್ದೇ ಇರುವದು. ಆದ್ದರಿಂದ ನೀನು ಹೇಳುವ ದೋಷಕ್ಕೆ ಅವಕಾಶವಿಲ್ಲ. ನಿದ್ರೆ ಕಳೆಯುತ್ತಲೆ ಜೀವನು ಮತ್ತೆ ಏಳುವನೆಂದೂ ಶ್ರುತಿ ಇದೆ. —೩೦

ಪೂ— ಅಂತಃಕರಣವು ಬ್ರಹ್ಮಸಾಕ್ಷಾತ್ಕಾರವಾಗುವ ತನಕ ಇರುವದೆಂಬ ಮಾತು ಹೊಂದುವದಿಲ್ಲ. ಪ್ರತಿದಿನವೂ ಗಾಢನಿದ್ರೆಯಲ್ಲಿ ಅಂತಃಕರ ಣವು ವಿನಾಶವಾಗುವದೆಂದು ಶ್ರುತಿ ಇದೆ.

ಸಿ— ಅಂತಃಕರಣವು ನಿದ್ರೆಯಲ್ಲಿ ಸೂಕ್ಷ್ಮರೂಪದಲ್ಲಿದ್ದು ಎಚ್ಚರದಲ್ಲಿ ಸ್ಥೂಲವಾಗಿ ಕಾಣಿಸಿಕೊಳ್ಳುವದಕ್ಕಾಗುತ್ತದೆ. ನಿದ್ರೆಯಲ್ಲಿ ಗಡಿಗೆ, ಬಟ್ಟೆ–ಮೊದಲಾದ ಅರಿವುಗಳನ್ನುಂಟುಮಾಡದಿರುವಮಾತ್ರದಿಂದ ಶ್ರುತಿ ಯಲ್ಲಿ ಆಗ ಅಂತಃಕರಣವನ್ನು ನಾಶವಾಯಿತೆನ್ನಲಾಗಿದೆ. ಗಂಡಸು ತನವು ಎಳೆಯ ತನದಲ್ಲಿ ಸೂಕ್ಷ್ಮರೂಪದಲ್ಲಿದ್ದು ಹರೆಯದಲ್ಲಿ ಮಕ್ಕಳನ್ನು ಹಡೆಯುವ ಸಾಮರ್ಥ್ಯವನ್ನು ತೋರಿಸುತ್ತ ಎದ್ದು ಕಾಣು ವಂತೆ ನಿದ್ರೆಯಲ್ಲಿ ಅಂತಃಕರಣವು ಸೂಕ್ಷ್ಮರೂಪದಲ್ಲಿದ್ದು ಸ್ಥೂಲರೂ ಪಕ್ಕೆ ತಿರುಗುವದು. —೩೧

ಸಿ— ಹಾಗಲ್ಲದೆ ಅಂತಃಕರಣವು ಯಾವಾಗಲೂ ಸ್ಥೂಲವಾಗಿಯೇ ಇದ್ದರೆ ಗಡಿಗೆ ಬಟ್ಟೆ-ಮೊದಲಾದ ಅರಿವುಗಳು ಯಾವಾಗಲೂ ತೋರಬೇಕಾಗುತ್ತಿತ್ತು. ಅಥವಾ ಯಾವಾಗಲೂ ಸೂಕ್ಷ್ಮವಾಗಿಯೇ ಇದ್ದರೆ ಯಾವಾಗಲೂ ಗಡಿಗೆ ಬಟ್ಟೆ-ಮೊದಲಾದ ಏನೊಂದು ಹೆಚ್ಚಿನ ಅರಿವೂ ಉಂಟಾಗದೆಯೇ ಇರುತ್ತಿರಬೇಕಾಗುತ್ತಿತ್ತು. ಹಾಗಿಲ್ಲ. ಆದ್ದರಿಂದ ಅದು ಒಂದೊಂದು ವೇಳೆ ಸ್ಥೂಲವಾಗಿಯೂ ಒಂದೊಂದು ವೇಳೆ ಸೂಕ್ಷ್ಮವಾಗಿಯೂ ಇರುವದೆಂದೊಪ್ಪಬೇಕು. —೩೨

೧೪ ಜೀವನು ಏನನ್ನಾದರೂ ಮಾಡುವವನು (೩೩ ...೩೯)

ಸಿ— ಜೀವನು ಅಂತಃಕರಣಗಳ ಸಾರವಾದ್ದರಿಂದಲೆ ಏನನ್ನಾದರೂ ಮಾಡುವವನೂ ಆಗಿರುವನು. ಆದ್ದರಿಂದಲೆ ಸ್ವರ್ಗವನ್ನು ಬಯಸುವವನು ಜ್ಯೋತಿಷ್ಟೋಮವನ್ನು ಮಾಡಬೇಕೆಂದು ಹೇಳಿರುವ ಮಾತು ಅರ್ಥಉಳ್ಳದ್ದಾಗುತ್ತದೆ. ಏನನ್ನಾದರೂ ಮಾಡುವದೆಂಬುದು ಜೀವನಿಗೆ ಸಂಬಂಧವಿಲ್ಲದೆ ಬರೀ ಅಂತಃಕರಣದಿಂದಲೆ ಸಾಗುತ್ತಿದ್ದ ಪಕ್ಷದಲ್ಲಿ ಜೀವನಿಗೆ ಸ್ವರ್ಗನರಕಗಳ ಸಂಬಂಧಕ್ಕೆ ದಾರಿ ಇರುವದಿಲ್ಲ. —೩೩

,, ಜೀವನು ಸ್ವರ್ಗಕ್ಕೂ ನರಕಕ್ಕೂ ಹೋಗಿಬರುತ್ತಿರುವನೆಂದು ಶ್ರುತಿ ಹೇಳುವದರಿಂದಲೂ ಕೂಡ ಅವನು ಪುಣ್ಯಪಾಪಗಳನ್ನು ಮಾಡುವವನೆಂದೊಪ್ಪಬೇಕು. —೩೪

,, ಜೀವನು ಸತ್ತಮೇಲೆ ದೇವತೆಗಳಿಗೆ ಯೋಗ್ಯವಾದ ಶರೀರವನ್ನೊ ನರಕಕ್ಕೆ ತಕ್ಕ ಶರೀರವನ್ನೊ ಪಡೆಯುವನೆಂದು ಹೇಳಿರುವದರಿಂದ ಅವನು ಪುಣ್ಯಪಾಪಗಳನ್ನು ಮಾಡುವವನೆಂದೊಪ್ಪಬೇಕು. —೩೫

,, ಜೀವನು ಒಪ್ಪಿಗೆಯನ್ನು ಕೊಡುವವನೆಂದೂ ಮಾಡುವವನೆಂದೂ ತಿಳಿಯುವವನೆಂದೂ ಮುಂತಾಗಿ ಶ್ರುತಿಯು ಹೇಳುವದರಿಂದ ಅವನು ಏನನ್ನಾದರೂ ಮಾಡುವವನೆಂದೊಪ್ಪಬೇಕು. ಇಲ್ಲದೆ ಹೋದರೆ ಶ್ರುತಿಯ ಮಾತಿಗೆ ಬೆಲೆಯೇ ಇಲ್ಲದೆ ಹೋದೀತು. —೩೬

ಪೂ— ಜೀವನು ಏನನ್ನಾದರೂ ಮಾಡುವವನೆಂದೊಪ್ಪಿದರೆ ಗಾಢನಿದ್ರೆಯಲ್ಲಿಯೂ ಕೂಡ ಅವನು ಏನನ್ನಾದರೂ ಮಾಡುವವನೆನ್ನಬೇಕಾಗುವದಲ್ಲ!

ಸಿ— ಸಾಂಖ್ಯರು ಜೀವನನ್ನು ಜ್ಞಾನಸ್ವರೂಪನೆಂದು ಹೇಳಿದರೂ ಹೇಗೆ ಗಾಢನಿದ್ರಾಕಾಲದಲ್ಲಿ ಗಡಿಗೆ, ಬಟ್ಟೆ-ಮೊದಲಾದವುಗಳ ಅರಿವು ಇರುವದಿಲ್ಲವೋ, ಹಾಗೆಯೆ ಜೀವನ ಮಾಡುವಿಕೆಯೂ ಒಂದೊಂದು ಕಾಲದಲ್ಲಿರುವದೇ ಹೊರತು ಯಾವಾಗಲೂ ಇರುವದಿಲ್ಲವೆಂದು ತಿಳಿಯಬೇಕು. —೩೭

ಪೂ— ಬುದ್ಧಿಯೇ ಮಾಡುವದೆಂದೇಕೆ ಹೇಳಿಬಿಡಬಾರದು ?

ಸಿ— ಬುದ್ಧಿಯೇ ಮಾಡುವದೆಂದರೆ ಅದರ ಸಾಧನತ್ವವೇ (ಕಾರಣವೆನ್ನುವಿಕೆಯೇ) ಹೋಗಿಬಿಡುವದರಿಂದ ಅದು ಮಾಡುವದಿಲ್ಲ; ಅದು ಮಾಡುವ ಸಾಧನ. —೩೮

,, ಜೀವನು ಪುಣ್ಯಪಾಪಗಳನ್ನು ಮಾಡುವವನಲ್ಲದೆ ಹೋದರೆ ಅವನಿಗೆ ಪರಮಾತ್ಮನಲ್ಲಿ ಒಮ್ಮುಖತೆಯೂ ಆಗುವದಿಲ್ಲ; ವೇದಾಂತವನ್ನು ಕೇಳುವದೂ ಚಿಂತಿಸುವದೂ ಧ್ಯಾನಿಸುವದೂ ಇಲ್ಲದೆ ಹೋಗುತ್ತದೆ. ಹೀಗಾಗಿ ಅವನಿಗೆ ಮೋಕ್ಷವೇ ಇಲ್ಲದೆ ಹೋಗುತ್ತದೆ. ಬುದ್ಧಿಗೇಮೋಕ್ಷವೆಂದರೆ ಬುದ್ಧಿಯು ಮೋಕ್ಷಕಾಲದಲ್ಲಿ ಹೋಗಿಬಿಡತಕ್ಕದ್ದಾದ್ದರಿಂದಲೂ ಜಡವಾದ್ದರಿಂದಲೂ ಅದಕ್ಕೆ ಮೋಕ್ಷವೆಂಬುದು ಹೊಂದಿಕೆಯಾಗುವ ಮಾತಲ್ಲ. —೩೯

೧೫ ಜೀವನ ಮಾಡುವಿಕೆಯು ಉಪಾಧಿಯನ್ನವಲಂಬಿಸಿರುವದು (೪೦)

ಪೂ— ಏನನ್ನಾದರೂ ಮಾಡುತ್ತಿರುವದೇ ಜೀವನ ಹುಟ್ಟುಗುಣವೆಂದು ನೈಯಾಯಿಕರು ಹೇಳುತ್ತಾರಲ್ಲ !

ಸಿ— ಬಡಗಿಯು ಮರವನ್ನು ಕೆತ್ತುವಾಗ ಕಷ್ಟಗೊಳ್ಳುತ್ತಾನೆ; ಬಾಚಿಯನ್ನೊಂದು ಕಡೆಗೆ ಒಗೆದು ಕುಳಿತಾಗ ಹಾಯಾಗಿರುವೆನೆಂದು ತಿಳಿಯುತ್ತಾನೆ. ಹೀಗೆ ಜೀವನು ಎಚ್ಚರದಲ್ಲಿಯೂ ಕನಸಿನಲ್ಲಿಯೂ ದೇಹ ಮೊದಲಾದವುಗಳ ಮೇಲಿನ ಅಭಿಮಾನದಿಂದ ಕೂಡಿದವನಾಗಿ ಏನನ್ನಾದರೂ ಮಾಡುತ್ತ ಕಷ್ಟಗೊಳ್ಳುತ್ತಾನೆ. ಗಾಢನಿದ್ರೆಯಲ್ಲಿ ದೇಹ ಮೊದಲಾದವುಗಳ ಮೇಲಿನ ಅಭಿಮಾನವಿಲ್ಲದ್ದರಿಂದ ಏನನ್ನೂ ಮಾಡದೆ ಹಾಯಾಗಿರುತ್ತಾನೆ. ಆದ್ದರಿಂದ ಜೀವನು ಏನನ್ನಾದರೂ ಮಾಡು

ವನೆನ್ನುವದು ಅವನು ದೇಹ ಮೊದಲಾದವುಗಳ ಮೇಲಿನ ಅಭಿಮಾನದಿಂದ ಕೂಡಿದಾಗಿನ ಮಾತೇ ಹೊರತು ಅವನ ಹುಟ್ಟುಗುಣವಲ್ಲ.—೪೦

೧೬ ಜೀವನು ಈಶ್ವರನ ಪ್ರೇರಣೆಯಿಂದ ಮಾಡುವವನು (೪೧...೪೨)

ಸಿ - ಜೀವನು ಪುಣ್ಯಪಾಪಗಳನ್ನು ಮಾಡುವಾಗ ಪರಮಾತ್ಮನ ಪ್ರೇರಣೆ ಇರುವದು. —೪೧

ಪೂ — ಈಶ್ವರನು ಸ್ವತಂತ್ರನಾದ್ದರಿಂದ ಜೀವರು ಏನೂ ಮಾಡದಿದ್ದರೂ ಫಲವನ್ನು ಕೊಡಬಹುದಲ್ಲವೆ ?

ಸಿ— ಈಶ್ವರನು ಜೀವರ ಪ್ರಯತ್ನಕ್ಕೆ ಅನುಗುಣವಾಗಿ ಸುಖದುಃಖಗಳನ್ನು ಕೊಡುತ್ತಾನೆ. ಹಾಗಿಲ್ಲದಿದ್ದರೆ ಮಾಡತಕ್ಕದ್ದೆಂದೂ ಮಾಡಬಾರದ್ದೆಂದೂ ಹೇಳುವ ಶ್ರುತಿಗೆ ಅರ್ಥವೇ ಇಲ್ಲದೆ ಹೋದೀತು. —೪೨

೧೭ ಜೀವರು ಬ್ರಹ್ಮದ ಅಂಶ (೪೩...೫೩)

ಪೂ— ಈಶ್ವರನೂ ಮತ್ತು ಜೀವನೂ ಸ್ವಾಮಿಭೃತ್ಯರಂತೆ ಬೇರೆಬೇರೆಯೋ ಬೆಂಕಿ ಮತ್ತು ಅದರ ಕಿಡಿಗಳಂತೆ ಒಂದೇಯೊ ?

ಸಿ— ಜೀವಬ್ರಹ್ಮರಿಗೆ ಎರಡು ಹಕ್ಕಿಗಳ ರೂಪಕವನ್ನು ಕೊಟ್ಟು ಹೇಳುವ ಶ್ರುತಿಯು ಸಾಕ್ಷಾತ್ತಾಗಿ ಅವರಿಬ್ಬರಿಗೆ ಭೇದವನ್ನೂ ಹೇಳಿದೆ. 'ಎಲೆ ಜೀವನೆ, ನೀನು ಬ್ರಹ್ಮನಾಗಿದ್ದಿ' ಎಂಬರ್ಥದ ವಾಕ್ಯದಿಂದ ಬೇರೆ ಶ್ರುತಿಯು ಅಭೇದವನ್ನೂ ಹೇಳಿದೆ.

ಪೂ — ಶ್ರುತಿಯು ಹೀಗೆ ಎರಡು ಮಾತನ್ನೂ ಆಡಿದರೆ ಒಂದಕ್ಕೊಂದು ವಿರೋಧವಾಗುವದಿಲ್ಲವೆ ?

ಸಿ— ಇಲ್ಲ. ಜೀವರು ಪ್ರತಿಬಿಂಬದಂತೆ; ಬ್ರಹ್ಮವು ಬಿಂಬದಂತೆ. ಪ್ರತಿಬಿಂಬವು ಸುಳ್ಳಾದದ್ದು; ಬಿಂಬವು ಮಾತ್ರ ನಿಜವಾದದ್ದು. ಆದ್ದರಿಂದ ವಿರೋಧವಿಲ್ಲ. ಅವರ ಸಂಬಂಧವು ಹೀಗಿರುವದರಿಂದ ಜೀವರನ್ನು ಬ್ರಹ್ಮದ ಅಂಶವೆಂದು ತಿಳಿಯಬೇಕು. —೪೩

,, ಈ ಸರ್ವಜಗತ್ತೂ ಬ್ರಹ್ಮದ ಒಂದು ಪಾದವೆಂದು ಶ್ರುತಿಯೇ ಹೇಳಿದೆ. ಪಾದವೆಂಬ ಮಾತಿಗೆ ಅಂಶವೆಂದರ್ಥ. —೪೪

ಶಿ— ಜೀವರು ಬ್ರಹ್ಮದ ಅಂಶವೆಂದು ಸ್ಮೃತಿಯೂ ಹೇಳುತ್ತದೆ. —೪೫

**ಪೂ**— ನೂಲಿಗೆ ಕೆಸರು ಹತ್ತಿದರೆ ನೂಲನ್ನು ಅಂಶವಾಗಿ ಉಳ್ಳ ಬಟ್ಟೆಗೂ ಕೆಸರು ಹತ್ತಿದಂತೆ ಅಂಶರಾದ ಜೀವರಿಗೆ ಸುಖದುಃಖಗಳು ಹತ್ತಿದರೆ ಅವರನ್ನು ತನ್ನ ಅಂಶವಾಗಿ ಉಳ್ಳ ಬ್ರಹ್ಮಕ್ಕೂ ಸುಖದುಃಖಗಳ ಸೋಂಕು ಹತ್ತುತ್ತದೆಯಲ್ಲ!

ಶಿ— ಪರಮಾತ್ಮನಿಗೆ ಸುಖದುಃಖಗಳ ಸೋಂಕು ಹತ್ತುವದಿಲ್ಲ. ಮನೆಯೊಳಗೆ ಬಿದ್ದಿರುವ ಸೂರ್ಯನ ಬೆಳಕು ಗವಾಕ್ಷಿಯ ಸಂಬಂಧದ ದೆಸೆಯಿಂದ ದುಂಡು, ಉದ್ದ–ಮೊದಲಾದ ವಿಚಿತ್ರಧರ್ಮಗಳನ್ನು ಹೊಂದಿ ಕಾಣುತ್ತಿದ್ದು ಮನೆಯ ಹೊರಗೆ ಆ ಧರ್ಮಗಳಿಲ್ಲದೆ ಇರುವಂತೆಯೂ ಅಥವಾ ಗಡಿಗೆ ಮೊದಲಾದವುಗಳೊಳಗಿರುವ ಆಕಾಶವು ಉದ್ದ, ಗಿಡ್ಡ–ಮೊದಲಾದ ಧರ್ಮಗಳನ್ನು ಹೊಂದಿ ಕಾಣುತ್ತಿದ್ದು ಗಡಿಗೆಯ ಹೊರಗೆ ಆ ಧರ್ಮಗಳು ಇಲ್ಲದೆ ಇರುವಂತೆಯೂ ಜೀವಚೈತನ್ಯವು ದೇಹಾಭಿಮಾನದ ದೆಸೆಯಿಂದ ಸುಖದುಃಖಗಳುಳ್ಳದ್ದಾಗಿಯೂ ದೇಹದ ಹೊರಗಿರುವ ಬ್ರಹ್ಮಚೈತನ್ಯವು ದೇಹಾಭಿಮಾನವಿಲ್ಲದ್ದರಿಂದ ಭಯಶೋಕಾದಿಗಳಿಲ್ಲದ್ದಾಗಿಯೂ ಇರುವದು. —೪೬

,, ಎಲ್ಲೆಲ್ಲಿಯೂ ತುಂಬಿರುವ ಆಕಾಶಕ್ಕೆ ಎಲ್ಲಿಯ ಸೋಂಕೂ ಇಲ್ಲದಿರುವಂತೆ ಎಲ್ಲೆಲ್ಲಿಯೂ ತುಂಬಿರುವ ಬ್ರಹ್ಮಕ್ಕೆ ಎಲ್ಲಿಯ ಸೋಂಕೂ ಇಲ್ಲವೆಂದು ಸ್ಮೃತಿಯೂ ಹೇಳುತ್ತದೆ. ೪೭

,, ಮಾಡತಕ್ಕದ್ದೆಂದೂ ಮಾಡಬಾರದೆಂದೂ ಶಾಸ್ತ್ರದಲ್ಲಿ ಹೇಳಿರುವ ಮಾತುಗಳೆಲ್ಲ ದೇಹಾಭಿಮಾನವುಳ್ಳ ಜೀವರಿಗೆ ಹೇಳಿದ್ದು ಹೊರತು ದೇಹಾಭಿಮಾನವಿಲ್ಲದ ಬ್ರಹ್ಮಕ್ಕಲ್ಲ; ಮೇಲೆ ಹೇಳಿದ ಸೂರ್ಯನ ಬೆಳಕೇ ಇದಕ್ಕೆ ದೃಷ್ಟಾಂತ. —೪೮

**ಪೂ**— ನಿಮ್ಮ ಅಭಿಪ್ರಾಯದಂತೆ ಜೀವರು ಒಬ್ಬರಿಗೊಬ್ಬರು ಬೇರೆಯಲ್ಲವಾದರೆ ಒಬ್ಬ ಜೀವನಿಗೆ ಸುಖವಾದರೆ ಎಲ್ಲರಿಗೂ ಸುಖವೂ ಒಬ್ಬ ಜೀವನಿಗೆ ದುಃಖವಾದರೆ ಎಲ್ಲರಿಗೂ ದುಃಖವೂ ಆಗಬೇಕಾದೀತು. ಅದರಂತೆ ಒಬ್ಬನು ಬಡವನೂ ಒಬ್ಬನು ಬಲ್ಲಿದನೂ ಆಗದೆಯೂ ಇರಬೇಕಾದೀತು.

೩- ಬ್ರಹ್ಮಜ್ಞಾನವಾಗುವ ತನಕ ಜೀವರಿಗೆ ದೇಹದ ಸಂಬಂಧವು ಬಿಟ್ಟಿದ್ದಿಲ್ಲವಾದ್ದರಿಂದ ಅವರು ಒಂದು ಅಳತೆಗೊಳಪಟ್ಟವರಾಗಿ ಬೇರೆಬೇರೆಯಾಗಿರುವದರಿಂದ ಸುಖದುಃಖಗಳ ಬೆರಕೆಯಾಗುವದಿಲ್ಲ —೪೯

,, ನಮ್ಮ ಮತದಂತೆ ಜೀವನು ಬ್ರಹ್ಮದ ಪ್ರತಿಬಿಂಬನು. ಅಂತಃಕರಣದಲ್ಲಿ ಬಿದ್ದಿರುವ ಪ್ರತಿಬಿಂಬದ ಸ್ವರೂಪರಾದ ಜೀವರು ಬೇರೆಬೇರೆ ಅಂತಃಕರಣಗಳ ಸಂಬಂಧದಿಂದ ಬೇರೆಬೇರೆಯಾಗಿ ಅಳತೆಗೊಳಪಟ್ಟವರಾಗಿರುವದರಿಂದ ಸುಖದುಃಖಗಳ ಬೆರಕೆಯಾಗುವದಿಲ್ಲ. —೫೦

,, ಜೀವರು ಎಲ್ಲೆಲ್ಲಿಯೂ ತುಂಬಿಕೊಂಡಿರುವವರೆಂದೂ ಎಲ್ಲ ಜೀವರೂ ಎಲ್ಲ ಶರೀರಗಳಲ್ಲಿಯೂ ಇರುವರೆಂದೂ ಹೇಳುವ ನೈಯಾಯಿಕರ ಮತದಂತೆ ನೋಡಿದರೆ ಯಾವ ಯಾವ ಪುಣ್ಯಪಾಪಗಳು ಯಾರ ಯಾರದೆಂಬ ವ್ಯವಸ್ಥೆಗೆ ದಾರಿ ಇಲ್ಲದ್ದರಿಂದ ಕೆಲವರು ಬಡವರೂ ಕೆಲವರು ಒಳ್ಳೆದರೂ ಆಗುವದಕ್ಕೆ ದಾರಿ ಇಲ್ಲ. —೫೧

,, 'ಇದನ್ನು ಮಾಡುತ್ತೇನೆ; ಇದನ್ನು ಬಿಡುತ್ತೇನೆ' ಎಂಬ ಮೊದಲಾದ ಉದ್ದೇಶಗಳೆಲ್ಲ ಸಾಧಾರಣವಾಗಿ ಆತ್ಮನಿಗೂ ಮನಸ್ಸಿಗೂ ಆಗುವ ಸಂಯೋಗದಿಂದ ಏರ್ಪಡುವದರಿಂದ ಎಲ್ಲ ಆತ್ಮರ ಸನ್ನಿಧಿಯಲ್ಲಿಯೂ ನಡೆಯುವ ಆ ಉದ್ದೇಶಗಳು ಇಂಥವರಿಗೆ ಸಂಬಂಧಪಟ್ಟವುಗಳೆಂಬ ನಿಯಮವಿಲ್ಲದ್ದರಿಂದ ಮೇಲೆ ಹೇಳಿದ ದೋಷವೇರ್ಪಟ್ಟೇ ಪಡುವದು —೫೨

,, ದೇಹ ಮೊದಲಾದವುಗಳ ಸಂಬಂಧದಿಂದ ಜೀವರು ಒಂದು ಅಳತೆಗೊಳಪಟ್ಟವರಾದ್ದರಿಂದ ಸುಖ, ದುಃಖ–ಮೊದಲಾದವುಗಳ ವ್ಯವಸ್ಥೆ ಹೊಂದುವದೆಂದರೆ ಅವರು ನಮ್ಮ ಮತಕ್ಕೆ ಬಂದವರಾಗುತ್ತಾರೆ. ಆದ್ದರಿಂದ ನೈಯಾಯಿಕರ ಮತವು ಸರಿಯಲ್ಲ. —೫೩

---

## ಪಾದ ೪

### ಲಿಂಗಶರೀರವಿಷಯಕವಾದ ಶ್ರುತಿಗಳಲ್ಲಿಯೂ ಒಂದಕ್ಕೊಂದಕ್ಕೆ ವಿರೋಧವಿಲ್ಲ

---

೧ ಇಂದ್ರಿಯಗಳೂ ಬ್ರಹ್ಮದಿಂದ ಹುಟ್ಟಿದವು (೧...೪)

ಸಿ— ಪಂಚಭೂತಗಳಂತೆ ಇಂದ್ರಿಯಗಳೂ ಬ್ರಹ್ಮದಿಂದ ಹುಟ್ಟಿದವೆಂದು ಸ್ಪಷ್ಟವಾಗಿ ಶ್ರುತಿ ಹೇಳುತ್ತದೆ. ೧

ಪೂ— ಇಂದ್ರಿಯಗಳು ಯಾವಾಗಲೂ ಇರತಕ್ಕವುಗಳಾದ್ದರಿಂದ ಅವುಗಳು ಹುಟ್ಟಿದವೆನ್ನುವದು ಉಪಚಾರದ ಮಾತಲ್ಲವೆ?

ಸಿ— ಅದು ಉಪಚಾರಕ್ಕೆ ಹೇಳಿದ ಮಾತಲ್ಲ. ಬ್ರಹ್ಮವನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಗುವದೆಂಬರ್ಥವನ್ನು ಹೇಳುವ ಸಂದರ್ಭದ ಮಾತಾದ್ದರಿಂದ ಅವರ ಹುಟ್ಟನ್ನು ಮುಖ್ಯವೆಂದೇ ತಿಳಿಯಬೇಕು. —೨

,, ಪಂಚಮಹಾಭೂತಗಳಿಗಿಂತ ಮುಂಚೆಯೇ ಇಂದ್ರಿಯಗಳ ಹುಟ್ಟನ್ನು ಹೇಳಿರುವದರಿಂದ ಆ ಹುಟ್ಟು ಮುಖ್ಯವೆ. ಇಲ್ಲದಿದ್ದರೆ ಪಂಚಮಹಾಭೂತಗಳ ಹುಟ್ಟು ಉಪಚಾರವೇ ಆಗಬೇಕಾದೀತು. — ೩

,, ಮನಸ್ಸು, ಪ್ರಾಣ, ವಾಕ್ ಮೊದಲಾದವುಗಳು ಭೂತಗಳಿಂದ ಹುಟ್ಟಿದವೆಂದು ಶ್ರುತಿ ಇರುವದರಿಂದ ಇಂದ್ರಿಯಗಳು ಯಾವಾಗಲೂ ಇರತಕ್ಕವುಗಳಲ್ಲ ಬಾರದು. — ೪

೨ ಇಂದ್ರಿಯಗಳು ಹನ್ನೊಂದು (೫, ೬)

ಪೂ— ಇಂದ್ರಿಯಗಳು ಕಣ್ಣು, ಕಿವಿ, ಚರ್ಮ, ನಾಲಿಗೆ, ಮೂಗು, ವಾಕ್, ಅಂತಃಕರಣ ಎಂಬ ಏಳೆ. ಪರಲೋಕಕ್ಕೆ ಹೋಗತಕ್ಕವುಗಳು ಏಳು ಇಂದ್ರಿಯಗಳೆಂದು ಶ್ರುತಿ ಇದೆ. — ೫

ಸಿ— ಪಾಣಿ, ಪಾದ, ಪಾಯು, ಉಪಸ್ಥ ಇವು ಕೂಡ ಜೀವನೊಡನೆ ಶರೀರದಲ್ಲಿದ್ದು ಜೀವನೊಡನೆ ಲೋಕಾಂತರಕ್ಕೆ ಹೋಗುವವು. ಆದ್ದರಿಂದ ಇಂದ್ರಿಯಗಳು ಹನ್ನೊಂದು. —೬

೩ ಇಂದ್ರಿಯಗಳು ಅಣುಗಳು (೭)

ಸಿ— ಇಂದ್ರಿಯಗಳು ಸೂಕ್ಷ್ಮವಾದವುಗಳು; ಪ್ರತ್ಯಕ್ಷವಾಗಿ ಕಾಣಬರತಕ್ಕವುಗಳಲ್ಲ. —೭

೪ ಪ್ರಾಣವೂ ಬ್ರಹ್ಮದಿಂದ ಹುಟ್ಟಿತು (೮)

ಸಿ— ಶ್ರೇಷ್ಠವಾದ ಪ್ರಾಣವೂ ಬ್ರಹ್ಮದಿಂದ ಹುಟ್ಟಿತೆಂದು ಶ್ರುತಿ ಇದೆ—೮

೫ ಪ್ರಾಣವೆಂದರೆ ಶರೀರದಲ್ಲಿ ಐದು ಬಗೆಯಾಗಿ ನೆಲೆಸಿರುವ
ಒಂದುವಾಯು (೯...೧೨)

**ಪೂ**— ಗಾಳಿಯೋ ಅಥವಾ ಎಲ್ಲ ಇಂದ್ರಿಯಗಳೂ ಸೇರಿ ಮಾಡುವ ಕ್ರಿಯೆಯೋ ಪ್ರಾಣವಲ್ಲವೆ?

ಸಿ— ಅಲ್ಲ. ಶ್ರುತಿಯು ಗಾಳಿಗಿಂತಲೂ ಇಂದ್ರಿಯಗಳ ಕ್ರಿಯೆಗಿಂತಲೂ ಬೇರೆಯಾಗಿ ಪ್ರಾಣದ ಹುಟ್ಟನ್ನು ಹೇಳಿದೆ. —೯

**ಪೂ**— ವಾಯುವೂ ಪ್ರಾಣವೂ ಬೇರೆಬೇರೆಯೆಂದಾದರೆ ಪ್ರಾಣವು ಏತರಿಂದಾಯಿತು?

ಸಿ— ಮಹಾಭೂತಗಳಿಂದ ಹುಟ್ಟಿದ ಕಣ್ಣು ಮೊದಲಾದ ಇಂದ್ರಿಯಗಳಂತೆ ಪ್ರಾಣವು ವಾಯುವಿನಿಂದ ಹುಟ್ಟಿದ ಒಂದು ವಸ್ತು. ಪ್ರಾಣದ ಹುಟ್ಟು ಇಂದ್ರಿಯಗಳ ಸಾಲಿನಲ್ಲಿಯೇ ಬಂದಿರುವದರಿಂದ ಪ್ರಾಣವು ಭೌತಿಕ. —೧೦

**ಪೂ**— ಪ್ರಾಣವೂ ಇಂದ್ರಿಯಗಳ ಸಾಲಿನಲ್ಲಿ ಬಂದಾದರೆ ಕಣ್ಣು ಮೊದಲಾದವುಗಳಿಗೆ ರೂಪ ಮೊದಲಾದ ವಿಷಯಗಳಿರುವಂತೆ ಪ್ರಾಣಕ್ಕೇನು ವಿಷಯ?

ಸಿ— ಪ್ರಾಣವು ಇಂದ್ರಿಯವಲ್ಲ. ಆದ್ದರಿಂದ ಅದಕ್ಕೊಂದು ವಿಷಯವಿರಬೇಕಾದದ್ದಿಲ್ಲ. ಹೀಗೆಂದು ಪ್ರಾಣವನ್ನು ವ್ಯರ್ಥವಾದದ್ದೆಂದೂ ತಿಳಿಯಬಾರದು. ಅದಕ್ಕೆ ಶರೀರವನ್ನು ಎತ್ತಿ ಹಿಡಿದಿರುವ ಕೆಲಸವಿರುವದು. —೧೧

,, ಪ್ರಾಣವೆಂಬುದು ಒಂದೆ. ಅಂತಃಕರಣವು ಒಂದೇ ಆದರೂ ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ-ಎಂಬ ಬೇರೆ ಬೇರೆ ವೃತ್ತಿಗಳಿಂದ ನಾಲ್ಕೆನಿಸಿದಂತೆ ಒಂದೇ ಆದ ಪ್ರಾಣವು ಬೇರೆ ಬೇರೆ ವೃತ್ತಿಗಳಿಂದ ಪ್ರಾಣ, ಅಪಾನ–ಮೊದಲಾದ ಐದೆನಿಸಿರುವದು. —೧೨

೬ ಪ್ರಾಣವೂ ಅಣು (೧೩)

ಸಿ— ಪ್ರಾಣವು ಸೂಕ್ಷ್ಮವಾದದ್ದು: ಪ್ರತ್ಯಕ್ಷವಾಗಿ ಕಾಣಬರತಕ್ಕದ್ದಲ್ಲ. —೧೩

೭ ಇಂದ್ರಿಯಗಳು ತಮ್ಮ ಅಭಿಮಾನಿದೇವತೆಗಳ ಸಹಾಯದಿಂದ ತಮ್ಮ ತಮ್ಮ ಕೆಲಸಗಳನ್ನು ಮಾಡುವವು (೧೪–೧೬)

**ಸಿ**— ಕಣ್ಣು ಮೊದಲಾದ ಇಂದ್ರಿಯಗಳು ಸೂರ್ಯ ಮೊದಲಾದ ದೇವತೆಗಳ ವಾಸದ ಗೂಡುಗಳು. ಅಲ್ಲಿ ದೇವತೆಗಳಿರುವರೆಂದು ಶ್ರುತಿ ಇದೆ. –೧೪

,, ಹೀಗೆ ದೇವತೆಗಳಿಲ್ಲದಿದ್ದರೂ ಇಂದ್ರಿಯಗಳೆಲ್ಲ ಜೀವನಿಗೆ ಸಂಬಂಧಿಸಿದವುಗಳು. ಆ ದೇವತೆಗಳು ಜೀವನ ಕರ್ಮಕ್ಕೆ ತಕ್ಕಂತೆ ಇಂದ್ರಿಯಗಳನ್ನು ಪ್ರೇರಿಸುತ್ತಿರುವರೇ ಹೊರತು ತಮ್ಮ ಮನಸ್ಸಿಗೆ ಬಂದಬಂದಂತೆ ಅಲ್ಲ. ೧೫

,, ಇಂದ್ರಿಯಗಳ ಕೆಲಸಗಳಿಂದಾಗುವ ಸುಖದುಃಖಗಳ ಫಲವನ್ನು ಅನುಭವಿಸುವವನು ಜೀವನು. ಆದ್ದರಿಂದ ಇಂದ್ರಿಯಗಳನ್ನು ಪ್ರೇರಿಸುವ ವಿಷಯದಲ್ಲಿ ಅವನೇ ಸ್ವತಂತ್ರನು. –– ೧೬

೮ ಪ್ರಾಣವು ಇಂದ್ರಿಯಗಳಿಗಿಂತ ಬೇರೆ (೧೭–೧೯)

**ಪೂ**— ಕೆಲವರು ಪ್ರಾಣವನ್ನೂ ಇಂದ್ರಿಯಗಳಲ್ಲಿ ಸೇರಿಸಿಕೊಂಡು ಇಂದ್ರಿಯಗಳು ಹನ್ನೊಂದೆನ್ನುವರಲ್ಲ !

**ಸಿ**— ಪ್ರಾಣವನ್ನು ಬಿಟ್ಟು ಕಣ್ಣು ಮೊದಲಾದವುಗಳೇ ಇಂದ್ರಿಯಗಳೆಂದು ಎಲ್ಲ ಶ್ರುತಿಗಳೂ ಹೇಳುತ್ತವೆ. –– ೧೭

,, ಪ್ರಾಣದ ಹುಟ್ಟನ್ನು ಹೇಳಿ ಅದಕ್ಕಿಂತ ಬೇರೆಯಾಗಿ ಇಂದ್ರಿಯಗಳ ಹುಟ್ಟನ್ನು ಹೇಳಿರುವದರಿಂದ ಪ್ರಾಣವು ಇಂದ್ರಿಯವಲ್ಲ. ––೧೮

,, ಅನೇಕಮಂತ್ರಗಳಲ್ಲಿ ಪ್ರಾಣವನ್ನೂ ಇಂದ್ರಿಯಗಳನ್ನೂ ಬೇರೆಬೇರೆಯಾಗಿ ಹೇಳಿರುವದು ಕಾಣಬರುವದರಿಂದ ಪ್ರಾಣವು ಇಂದ್ರಿಯವಲ್ಲ–೧೯

೯ ಶರೀರಗಳೆಲ್ಲ ಐದು ಭೂತಗಳಿಂದಾದವುಗಳು (೨೦....೨೨)

**ಪೂ**— ಪಂಚಭೂತಗಳನ್ನು ಮಾತ್ರ ಬ್ರಹ್ಮನು ಹುಟ್ಟಿಸಿದನೆಂದೂ ಚರಾಚರ ಶರೀರಗಳೆಲ್ಲ ಹಿರಣ್ಯಗರ್ಭನ ಕೆಲಸವೆಂದೂ ಕೆಲವರ ಅಭಿಪ್ರಾಯವಿದೆಯಲ್ಲ !

**ಸಿ**— ಪರಮಾತ್ಮನೇ ಐದು ಭೂತಗಳನ್ನು ಬೆರಸಿ ಹೆಸರುಗಳೂ ಆಕಾರಗಳೂ ಉಳ್ಳ ಚರಾಚರಶರೀರಗಳನ್ನು ಹುಟ್ಟಿಸಿದನು. ಪರಮಾತ್ಮನೆ

ಹಿರಣ್ಯಗರ್ಭನ ಶರೀರವಲ್ಲಿನ್ದು ಕೊಂಡು ಚರಾಚರಶರೀರಗಳನ್ನು ಹುಟ್ಟಿಸಿದನೆಂದು ತಿಳಿಯಬೇಕು. —೨೦

,, ಮಾಂಸ ಮೊದಲಾದವುಗಳು ಭೂಮಿಯಿಂದಾದವುಗಳು. ಇದರಂತೆ ನೀರಿನಿಂದ ರಕ್ತ ಮೊದಲಾದವುಗಳೂ ಅಗ್ನಿಯಿಂದ ಮೂಳೆ ಮೊದಲಾದವುಗಳೂ ಆದವು. ಹೀಗೆಯೇ ಶರೀರದಲ್ಲಿ ವಾಯುವಿನಿಂದಾದ ಭಾಗವೂ ಇದೆ. ಆಕಾಶವು ಇವುಗಳಿಗೆಲ್ಲ ಅವಕಾಶವನ್ನು ಕೊಟ್ಟಿಟ್ಟುಕೊಂಡಿದೆ. ಹೀಗಾಗಿ ಶರೀರಗಳೆಲ್ಲ ಐದು ಭೂತಗಳಿಂದಾದವುಗಳು. —೨೧

,, ಶರೀರದಲ್ಲಿ ಪೃಥ್ವಿಯಿಂದಾದ ಮಾಂಸ ಮೊದಲಾದವುಗಳು ಹೆಚ್ಚಾಗಿರುವದರಿಂದ ಪಾಮರರು ಶರೀರಗಳನ್ನು ಪೃಥ್ವಿಯ ಸಂಬಂಧವಾದದ್ದೆಂದು ತಿಳಿಯುವರು. —೨೨

## ಅಧ್ಯಾಯ ೩

### ಸಾಧನಗಳನ್ನು ಗೊತ್ತುಮಾಡುವದು

### ಪಾದ ೧

### ಸಂಸಾರವೆಂದಿಗೂ ಬೇಡವೆನಿಸುವಂತಿರುವ ಲೋಕಾಂತರಗಳ ಸುತ್ತಾಟ

೧ ಪರಲೋಕಕ್ಕೆ ಹೋಗುವಾಗ ಜೀವನು ಭೂತಸೂಕ್ಷ್ಮಗಳೊಡನೆ ಹೋಗುತ್ತಾನೆ (೧-೭)

ಸಿ— ಪುಣ್ಯಗಳನ್ನು ಮಾಡಿದವರು ಸತ್ತಮೇಲೆ ಸ್ವರ್ಗಕ್ಕೆ ಹೋಗುವರೆಂದು ಹೇಳುವರಷ್ಟೆ. ಹಾಗೆ ಲೋಕಾಂತರಕ್ಕೆ ಹೋಗುವಾಗ ಸೂಕ್ಷ್ಮಶರೀರವನ್ನು ಸುತ್ತುಗೊಂಡಿರುವ ಜೀವನು ತಾನು ಈ ಲೋಕದಲ್ಲಿ ಅಗ್ನಿಯಲ್ಲಿ ಹೋಮವನ್ನು ಮಾಡಿದ ಸಮಿತ್ತು, ತುಪ್ಪ-ಮೊದಲಾದ ದ್ರವ್ಯ

ಗಳ ಸೂಕ್ಷ್ಮರೂಪಗಳಿಂದ ಕೂಡಿದವನಾಗಿ ಸ್ವರ್ಗಲೋಕಕ್ಕೆ ಹೋಗುತ್ತಾನೆ. ಈ ಅಭಿಪ್ರಾಯವು ವೇದಾಂತನಲ್ಲಿ ಒಂದು ಸಂವಾದವಲ್ಲಿ ಕಂಡು ಬಂದಿದೆ. ಸೂಕ್ಷ್ಮಾವಸ್ಥೆಯನ್ನು ಹೊಂದಿದ ಆ ಸಮಿತ್ತು, ತುಪ್ಪ-ಮೊದಲಾದ ದ್ರವ್ಯಗಳೆ ದೇವಶರೀರಾಕಾರವಾಗಿ ರೂಪುಗೊಳ್ಳುತ್ತವೆ. ಐದನೆಯ ಅಗ್ನಿಯಾದ ಸ್ತ್ರೀಯಲ್ಲಿ ಹೋಮಮಾಡಿದ ದ್ರವ್ಯಗಳು ಗರ್ಭದಲ್ಲಿ ಪಿಂಡವಾಗಿ ಪುರುಷನೆನಿಸುತ್ತವೆ. ಇದರ ಅಭಿಪ್ರಾಯವೇನೆಂದರೆ: ಸತ್ತವನನ್ನು ಅವನ ಬಂಧುಗಳು ಅವನು ಈ ಲೋಕದಲ್ಲಿ ಅಗ್ನಿಯಲ್ಲಿ ಹೋಮಮಾಡಿದ ಸಮಿತ್ತು, ತುಪ್ಪ-ಮೊದಲಾದವುಗಳ ಸೂಕ್ಷ್ಮರೂಪಗಳೊಡನೆ ದ್ಯುಲೋಕವೆಂಬ ಅಗ್ನಿಯಲ್ಲಿ ಹೋಮ ಮಾಡುವರು. ಆಗ ಆದರಿಂದ ಅವನು ದೇವಶರೀರವನ್ನು ಕಾಣಿಸಿಕೊಳ್ಳುವನು. ಆ ದೇವಶರೀರವು ಕೆಲವು ಕಾಲ ಸ್ವರ್ಗಲೋಕವಲ್ಲಿ ಸುಖವನ್ನು ಅನುಭವಿಸಿ ಪುಣ್ಯವು ತೀರಿ ಹೋದ ಮೇಲೆ ಬೆಣ್ಣೆಯಂತೆ ಕರಗುವದು. ಆಗ ಅವನನ್ನು ಕರೆದುಕೊಂಡು ಹೋಗುವ ದೇವತೆಗಳು ಅವನನ್ನು ಮಳೆಯೆಂಬ ಅಗ್ನಿಯಲ್ಲಿ ಹೋಮಮಾಡುವರು. ಆಗ ಅವನು ನೀರಾಗುವನು. ಆ ನೀರನ್ನು ಕರೆದುಕೊಂಡು ಹೋಗುವವರು ಪೃಥ್ವಿಯೆಂಬ ಅಗ್ನಿಯಲ್ಲಿ ಹೋಮಮಾಡುವರು. ಆಗ ಅವನು ಅಕ್ಕಿ ಗೋಧಿ-ಮೊದಲಾದ ಧಾನ್ಯದ ರೂಪಾಗುವನು. ಆ ಧಾನ್ಯವು ಅನ್ನದ ಮೂಲಕ ಪುರುಷನೆಂಬ ಅಗ್ನಿಯಲ್ಲಿ ಹೋಮವಾಗುವದು. ಆಗ ಅವನು ರೇತಸ್ಸಿನ ರೂಪಾಗುವನು. ಆ ರೇತಸ್ಸೆಂಬ ನೀರುಗಳು ಸ್ತ್ರೀಯೆಂಬ ಅಗ್ನಿಯಲ್ಲಿ ಹೋಮವಾಗುವವು. ಆಗ ಆ ನೀರುಗಳು ಗರ್ಭದಲ್ಲಿ ಪಿಂಡವಾಗಿ ಪುರುಷನೆನಿಸುವವು. ಹೀಗೆ ಪಂಚಾಗ್ನಿ ಕ್ರಮದಿಂದ ಗರ್ಭವೇರ್ಪಡುವದು. —೧

**ಪೂ**— ಹೋಮದ್ರವ್ಯಗಳಾದ ಸಮಿತ್ತು ಮೊದಲಾದವುಗಳು ಭೂಭಾಗ ಹೆಚ್ಚಾಗಿರತಕ್ಕವುಗಳು. ಹಾಲು, ಮೊಸರು-ಮೊದಲಾದವುಗಳು ನೀರಿನ ಭಾಗ ಹೆಚ್ಚಾಗಿರತಕ್ಕವುಗಳು. ತುಪ್ಪವು ಅಗ್ನಿಯ ಭಾಗ ಹೆಚ್ಚಾಗಿರತಕ್ಕದ್ದು. ಹೀಗೆ ಹೋಮದ್ರವ್ಯಗಳಲ್ಲಿ ಮೂರು ಬಗೆಗಳಿರುವವು. ಹೀಗಿರುವಾಗ ನೀರುಗಳು ಪುರುಷನೆನಿಸುವವೆಂಬ ಮಾತು ಹೇಗೆ ಹೊಂದುತ್ತದೆ?

ಸಿ— ಹೋಮದ್ರವ್ಯಗಳಲ್ಲಿ ನೀರಿನಂಶವೆ ಬಹಳವಾಗಿರುವದರಿಂದ ನೀರುಗಳು ಪುರುಷನಾಗುವವೆಂದು ಹೇಳಲಾಗಿದೆ. ನೀರುಗಳೆಂಬ ಮಾತಿನಿಂದ ಭೂಮಿ, ನೀರು, ಅಗ್ನಿ–ಎಂಬ ಮೂರನ್ನೂ ಗ್ರಹಿಸಬೇಕು. —೨

,, ಇಂದ್ರಿಯಗಳು ಜೀವನೊಡನೆ ಸ್ವರ್ಗಲೋಕಕ್ಕೆ ಹೋಗುವವೆಂದು ಹೇಳಿರುವದರಿಂದ ಇಂದ್ರಿಯಗಳಿಗೆ ಆಶ್ರಯವಾದ ಭೂಮಿ ಮೊದಲಾದ ದ್ರವ್ಯಗಳೂ ಅವನೊಡನೆ ಹೋಗುವವೆಂದು ಒಪ್ಪಬೇಕು. —೩

ಪೂ— ಸಾಯುವಾಗ ವಾಗಿಂದ್ರಿಯವು ಅಗ್ನಿಯಲ್ಲಿಯೂ ಚಕ್ಷುರಿಂದ್ರಿಯವು ಸೂರ್ಯನಲ್ಲಿಯೂ ಮನಸ್ಸು ಚಂದ್ರನಲ್ಲಿಯೂ ಸೇರಿಹೋಗುವವೆಂದು ಮುಂತಾಗಿ ಶ್ರುತಿ ಹೇಳಿರುವದರಿಂದ ಇಂದ್ರಿಯಗಳು ಜೀವನೊಡನೆ ಸ್ವರ್ಗಲೋಕಕ್ಕೆ ಹೋಗುವವೆಂಬ ಮಾತೇ ಕೂಡುವದಿಲ್ಲವಲ್ಲ! —೪

ಸಿ— ಇಂದ್ರಿಯಗಳು ಜೀವನೊಡನೆ ಹೋಗುವವೆಂದು ಅನೇಕ ಶ್ರುತಿಗಳಿರುವದರಿಂದ ಅವು ತಮ್ಮ ಅಭಿಮಾನಿದೇವತೆಗಳಲ್ಲಿ ಸೇರಿಹೋಗುವವೆಂಬ ಮಾತಿಗೆ ಅಷ್ಟು ಬೆಲೆ ಇಲ್ಲ. —೪

ಪೂ— ದ್ಯುಲೋಕವೆಂಬ ಮೊದಲನೆ ಅಗ್ನಿಯಲ್ಲಿ ಶ್ರದ್ಧೆಯನ್ನು ಹೋಮಮಾಡುವರೆಂಬ ಮಾತಿರುವದರಿಂದ ಅದರಲ್ಲಿ ಹಾಲು, ಮೊಸರು–ಮೊದಲಾದವುಗಳ ಹೋಮವಾಗುವದೆಂಬ ಮಾತೇ ಕೂಡುವದಿಲ್ಲವಲ್ಲ! —೫

ಸಿ— ಅಲ್ಲಿ ಶ್ರದ್ಧೆಯೆಂದರೆ ಶ್ರದ್ಧೆಯಿಂದ ಹೋಮಮಾಡಿದ ದ್ರವ್ಯಗಳೆಂದು ತಿಳಿಯಬೇಕು. ಲೋಕದಲ್ಲಿ ಹಾಲು, ಮೊಸರು–ಮೊದಲಾದ ದ್ರವ್ಯಗಳನ್ನು ಹೋಮಮಾಡುವರೇ ಹೊರತು ನಿರಾಕಾರವಾದ ಶ್ರದ್ಧೆಯನ್ನೆ ಹೋಮಮಾಡುವದಾಗುವ ಮಾತಲ್ಲ. —೫

ಪೂ— ಹೋಮದ್ರವ್ಯಗಳು ಸ್ವರ್ಗಕ್ಕೆ ಹೋಗುವವೆಂದು ಮಾತ್ರ ನಾವು ಕೇಳಿದ್ದೇವೆ. ಜೀವನು ಹೋಗುವನೆಂದೆಲ್ಲಿದೆ? —೬

ಸಿ— ಯಜ್ಞ, ಯಾಗ–ಮೊದಲಾದವುಗಳನ್ನು ಮಾಡಿದವರು ಧೂಮ ಮೊದಲಾದ ಮಾರ್ಗದಿಂದ ಸ್ವರ್ಗಲೋಕಕ್ಕೆ ಹೋಗುವರೆಂದು ಶ್ರುತಿಯು ಹೇಳಿದೆ. ಆದ್ದರಿಂದ ಜೀವರು ಅಲ್ಲಿಗೆ ಹೋಗುತ್ತಾರೆಂದು ತಿಳಿಯಬೇಕು. —೬

**ಪೂ**— ಕರ್ಮಿಗಳು ಸ್ವರ್ಗಲೋಕಕ್ಕೆ ಹೋದರೂ ಅಲ್ಲಿ ಅವರಿಗೇನೂ ಭೋಗವೇನೂ ಉಂಟಾಗುವ ಹಾಗಿಲ್ಲ. ಅವರು ದೇವತೆಗಳಿಗೆ ಅನ್ನವಾಗುವರೆಂದು ಶ್ರುತಿ ಹೇಳುತ್ತದೆ. ಹುಲಿಗಳಿಗೆ ಹೇಗೊ ಹಾಗೆ ದೇವತೆಗಳಿಗೆ ಆಹಾರವಾಗುವ ಅವರಿಗೆ ಭೋಗವು ಹೇಗೆ ಸಂಭವಿಸೀತು ?

**ಸಿ**— ಅವರು ದೇವತೆಗಳಿಗೆ ಆಹಾರವಾಗುವರೆಂಬ ಮಾತಿಗೆ ಆಳಾಗಿ ದುಡಿಯುವರೆಂದರ್ಥ. ಕರ್ಮಿಗಳು ಆತ್ಮಜ್ಞಾನವಿಲ್ಲದವರಾದ್ದರಿಂದ ಅವರು ದೇವತೆಗಳಿಗೆ ಆಳಾಗಿ ದುಡಿಯತಕ್ಕವರಾಗುತ್ತಾರೆ. ಆತ್ಮಜ್ಞಾನವಿಲ್ಲದವರು ದೇವತೆಗಳನ್ನು ತಮಗಿಂತ ಬೇರೆಯೆಂದು ಉಪಾಸನೆಮಾಡಿ ಅವರ ಆಳಾಗುವರೆಂದು ಸ್ಪಷ್ಟವಾಗಿ ಶ್ರುತಿ ಇದೆ. ಇಷ್ಟೇ ಹೊರತು ದೇವತೆಗಳು ಹುಲಿಗಳಂತೆ ಕರ್ಮಿಗಳ ಮಾಂಸ, ರಕ್ತ-ಮೊದಲಾದವುಗಳನ್ನು ತಿನ್ನುವದಿಲ್ಲ. ಅಮೃತವನ್ನು ತಿನ್ನುವ ಅವರು ಮಾಂಸವನ್ನು ತಿನ್ನುವದು ಅಸಂಭವ. ---೭

೨ ಕರ್ಮಶೇಷದಿಂದ ಮತ್ತೆ ಹುಟ್ಟುವದು (೮..೧೧)

**ಪೂ**— ಸತ್ತಮೇಲೆ ಸ್ವರ್ಗಕ್ಕೆ ಹೋದವನು ತನ್ನ ಕರ್ಮಗಳನ್ನೆಲ್ಲ ಅನುಭವಿಸಿ ತೀರಿಸಿದ ಮೇಲೆ ಈ ಲೋಕಕ್ಕೆ ಹಿಂದಿರುಗುವನೆಂದು ಶ್ರುತಿಯ ಅಭಿಪ್ರಾಯವಿರುವಂತೆ ತೋರುತ್ತದೆ. ಹೀಗಿರುವಾಗ ಅವನು ಈ ಲೋಕದಲ್ಲಿ ಹುಟ್ಟಿ ಪಡೆಯುವ ಪರಿಸ್ಥಿತಿಗೇನು ಕಾರಣವನ್ನು ಹೇಳಲಾದೀತು ?

**ಸಿ**— ಯಾವ ಕರ್ಮಗಳ ಫಲವಾಗಿ ಅವನಿಗೆ ಸ್ವರ್ಗವು ಸಿಕ್ಕಿದೆಯೊ ಅವುಗಳನ್ನು ಅನುಭವಿಸಿ ತೀರಿಸುವನೆಂದರ್ಥ. ಆ ಪುಣ್ಯವು ತೀರುತ್ತ ಬರುತ್ತಲೆ ಅದು ತೀರುತ್ತ ಬಂತೆಂಬ ದುಃಖದ ತಾಪದಿಂದ ಜಲಮಯವಾದ ಅವನ ಶರೀರವು ಕರಗುತ್ತದೆ. ಆಮೇಲೆ ಇನ್ನೂ ಈ ಲೋಕದಲ್ಲ ಅನುಭವಿಸಬೇಕಾದ ಪಾಪಪುಣ್ಯಗಳ ಶೇಷವುಳ್ಳವನಾಗಿ ಅವನು ಹಿಂದಿರುಗುವದರಿಂದ ಆಮೇಲೆ ಈ ಲೋಕದಲ್ಲಿ ಹುಟ್ಟಿ ಪಡೆಯುವ ಪರಿಸ್ಥಿತಿಗಳಿಗೆಲ್ಲ ಅವನ ಕರ್ಮಶೇಷವೇ ಕಾರಣವೆಂದು ಹೇಳುವದಕ್ಕಾಗುತ್ತದೆ. -೮

**ಪೂ**— ಸ್ವರ್ಗಕ್ಕೆ ಹೋದವರು ಹಿಂದಿರುಗುವರೆಂಬದಕ್ಕೆ ಆಧಾರವಾಗಿ ಹೇಳುವ ಶ್ರುತಿಯಲ್ಲಿ 'ಒಳ್ಳೆ ಚರಣ ಉಳ್ಳವರು' ಎಂದರೆ ಸುಶೀಲರು

ಒಳ್ಳೆ ಜನ್ಮಕ್ಕೂ. 'ಕೆಟ್ಟ ಚರಣ ಉಳ್ಳವರು' ಎಂದರೆ ದುಃಶೀಲರು ಕೆಟ್ಟ ಜನ್ಮಕ್ಕೂ ಹೊಂದಿರುಗುವರೆಂದಿದೆ. ಇದರಿಂದ ಜನ್ಮಕ್ಕೆ 'ಚರಣವು' ಎಂದರೆ ಶೀಲವು ಕಾರಣವೆಂದಾಗುತ್ತದೆ. ಕರ್ಮಶೇಷವು ಕಾರಣವೆಂದಾಗುವದಿಲ್ಲ ವಲ್ಲ? —೯

ಸಿ— 'ಚರಣ' ಎಂದರೆ ಲಕ್ಷಣಾರ್ಥದಿಂದ ಕರ್ಮಶೇಷವೆಂದೇ ಕಾರ್ಷ್ಣಾಜಿನಿಯೆಂಬಾಚಾರ್ಯರ ಅಭಿಪ್ರಾಯ. —೯

ಪೂ— ಚರಣವೆಂದರೆ ಕರ್ಮಶೇಷವೆಂದು ದೂರದ ಅರ್ಥವೇಕೆ? —೧೦

ಸಿ— ಕರ್ಮವನ್ನು ಮಾಡುವವರೆಲ್ಲ ಒಳ್ಳೆ ಚರಣ ಉಳ್ಳವರೆ ಎಂದರೆ ಸುಶೀಲರೆ ಆಗಿರಬೇಕು. ಆದ್ದರಿಂದ ಚರಣವೆಂದರೆ ಕರ್ಮಶೇಷವೆಂದರ್ಥವಾಗಿ ಜನ್ಮಕ್ಕೆ ಕಾರಣವಾಗುವದು. —೧೦

,, ಚರಣವೆಂದರೆ ವಾಚ್ಯಾರ್ಥದಿಂದಲೆ ಪಾಪಪುಣ್ಯಗಳೆಂದು ಬಾದರಿ ಆಚಾರ್ಯರ ಅಭಿಪ್ರಾಯ. —೧೧

೩ ಪಾಪಕರ್ಮದಿಂದ ನರಕವಾಗುವದು (೧೨—೨೧)

ಪೂ— ಈ ಲೋಕವನ್ನು ಬಿಟ್ಟು ಹೋಗುವವರೆಲ್ಲ ಚಂದ್ರಲೋಕಕ್ಕೆ ಎಂದರೆ ಸ್ವರ್ಗಕ್ಕೆ, ಹೋಗುವರೆಂಬ ಶ್ರುತಿ ಇರುವದರಿಂದ ಪಾಪಿಗಳೂ ಪುಣ್ಯವಂತರೂ ಎಲ್ಲರೂ ಸ್ವರ್ಗಕ್ಕೇ ಹೋಗುತ್ತಾರೆ. ಹೀಗಿರುವಾಗ ಪುಣ್ಯವಂತರು ಮಾತ್ರ ಸ್ವರ್ಗಕ್ಕೆ ಹೋಗುವರೆಂಬುದೇಕೆ? —೧೨

ಸಿ— ಈ ಲೋಕವನ್ನು ಬಿಟ್ಟು ಹೋಗುವ ಪಾಪಿಗಳು ನರಕಲೋಕದಲ್ಲಿ ದುಃಖವನ್ನು ಅನುಭವಿಸಿ ಆ ಮೇಲೆ ಹಿಂದಿರುಗುವರೆಂದೂ ಶ್ರುತಿ ಇದೆ. ಪಾಪಿಗಳಿಗೆ ಸ್ವರ್ಗಲೋಕದಲ್ಲಿ ಪ್ರವೇಶವೇ ಇಲ್ಲ. ಎಲ್ಲರೂ ಸ್ವರ್ಗಕ್ಕೆ ಹೋಗುವರೆಂಬ ಮಾತಿಗೆ ಪುಣ್ಯವಂತರೆಲ್ಲರೂ ಎಂದರ್ಥ. —೧೩

,, ಪಾಪಿಗಳಿಗೆ ನರಕವಾಗುವದೆಂದು ಸ್ಮೃತಿಯೂ ಹೇಳುತ್ತದೆ. —೧೪

,, ನರಕಲೋಕದಲ್ಲಿ ಏಳು ಮುಖ್ಯ ನರಕಗಳಿರುವವೆಂದು ಪುರಾಣಿಕರು ಹೇಳುವರು. ಪಾಪಿಗಳು ಅಲ್ಲಿಗೆ ಹೋಗುವರು. —೧೫

ಪೂ— ಅಲ್ಲಿ ಚಿತ್ರಗುಪ್ತರೇ ಮೊದಲಾದವರು ಇದ್ದಾರಲ್ಲ! ಅವರು ಪಾಪಿಗಳೆ?

ಸಿ—ಅವರು ಅಲ್ಲಿ ಯಮನ ಅಪ್ಪಣೆಯಂತೆ ಇರುವ ಅಧಿಕಾರಿಗಳೇ ಹೊರತು ಅಲ್ಲಿ ಯಾತನೆಯನ್ನು ಅನುಭವಿಸುವದಕ್ಕೆ ಬಂದಿರುವ ಪಾಪಿಗಳಲ್ಲ-೧೬

,, ಕರ್ಮಿಗಳು ಪಿತೃಯಾಣವೆಂಬ ದಾರಿಯಿಂದ ಸ್ವರ್ಗಕ್ಕೂ ಉಪಾಸಕರು ದೇವಯಾನವೆಂಬ ಮಾರ್ಗದಿಂದ ಬ್ರಹ್ಮಲೋಕಕ್ಕೂ ಹೋಗುವರೆಂದು ಎಲ್ಲ ಶ್ರುತಿಗಳೂ ಹೇಳುತ್ತವೆ. ಪಾಪಿಗಳು ಈ ಯಾವ ದಾರಿಯಲ್ಲಿಯೂ ಕಾಲಿಡಲಾಗುವದಿಲ್ಲ. —೧೭

ಪೂ— ಹಿಂದಿರುಗಿ ಬರಬೇಕಾದವರೆಲ್ಲರೂ ತಮಗೆ ಬರಬೇಕಾದ ದೇಹಕ್ಕಾಗಿ ಐದನೆ ಅಗ್ನಿಯಾದ ಸ್ತ್ರೀಯಲ್ಲಿ ಹೋಮವಾಗುವ ಸ್ಥಿತಿಗೆ ಬರಬೇಕಾದರೆ ಚಂದ್ರಲೋಕಕ್ಕೆ ಹೋಗಬೇಕಲ್ಲವೆ ?

ಸಿ— ಪಾಪಿಗಳು ಹುಟ್ಟಿ ಸಾಯುತ್ತಿರುವದೆಂಬ ಮೂರನೆ ದಾರಿಯವರು. ಮನುಷ್ಯಶರೀರವನ್ನು ಪಡೆಯುವವರಿಗೆ ಐದನೆ ಅಗ್ನಿಯಾದ ಸ್ತ್ರೀಯಲ್ಲಿ ಹೋಮವಾಗಬೇಕು. ಸಸ್ಯಗಳಾಗಿಯೋ ಹುಳಗಳಾಗಿಯೋ ಆಗುವವರಿಗೆ ಅದು ಬೇಕಾಗಿಲ್ಲ. ಕೆಲವರು ಪಾಪಿಗಳು ಹೀಗಾಗುವರು. ಆದ್ದರಿಂದ ಅವರು ಚಂದ್ರಲೋಕಕ್ಕೆ ಹೋಗಬೇಕಾದದ್ದಿಲ್ಲ. —೧೮

,, ಇದಲ್ಲದೆ ಐದನೆ ಅಗ್ನಿಯಲ್ಲಿ ಹೋಮವಾದವರು ಮನುಷ್ಯರಾಗುವರೆಂದ ಮಾತ್ರಕ್ಕೆ ಹಾಗೆ ಹೋಮವಾಗದವರು ಮನುಷ್ಯರಾಗುವದಿಲ್ಲವೆಂಬ ನಿಯಮವೇನೂ ಇಲ್ಲ. ದ್ರೋಣ, ಧೃಷ್ಟದ್ಯುಮ್ನ, ಸೀತಾ, ದ್ರೌಪದಿ-ಇವರೆಲ್ಲ ಐದನೆಯ ಅಗ್ನಿಯಲ್ಲಿ ಹೋಮವಾದವರಲ್ಲವೆಂದು ಲೋಕದಲ್ಲಿ ಪ್ರಸಿದ್ಧವಾಗಿದೆ —೧೯

,, ಗರ್ಭದ ಚೀಲದಿಂದ ಹೊರಕ್ಕೆ ಬರುವದು, ಮೊಟ್ಟೆಯನ್ನೊಡೆದುಕೊಂಡು ಹುಟ್ಟುವದು, ಬೆವರಿನಿಂದ ಹುಟ್ಟುವದು, ಭೂಮಿಯಿಂದ ಮೇಲಕ್ಕೇಳುವದು-ಈ ನಾಲ್ಕು ಬಗೆಯ ಪ್ರಾಣಿಗಳಲ್ಲಿ ಬೆವರಿನಿಂದ ಹುಟ್ಟುವದು ಮತ್ತು ಭೂಮಿಯನ್ನು ಸೀಳಿಕೊಂಡೇಳುವದು-ಈ ಎರಡರಲ್ಲಿ ಐದನೆ ಅಗ್ನಿಯಲ್ಲಿ ಆಹುತಿಯಾಗುವ ಮಾತೇ ಇಲ್ಲ. —೨೦

ಪೂ— ಮೊಟ್ಟೆಯನ್ನೊಡೆದುಕೊಂಡು ಹುಟ್ಟುವದು, ಗರ್ಭದ ಚೀಲದಿಂದ ಹೊರಕ್ಕೆ ಬರುವದು ಮತ್ತು ಭೂಮಿಯಿಂದ ಮೇಲಕ್ಕೇಳುವದು-ಈ ಮೂರೇ ಅಲ್ಲವೆ ?

ಸಿ— ಆ ಮೂರೇ ಸಂಖ್ಯೆಯನ್ನು ಹೇಳುವಾಗ ಬೆವರಿನಿಂದ ಹುಟ್ಟುವ ದೆಂಬುದು ಭೂಮಿಯಿಂದ ಮೇಲಕ್ಕೇಳುವದರಲ್ಲಿ ಅಡಕವಾಗಿರುವ ದೆಂದು ತಿಳಿಯಬೇಕು. ಏಕೆಂದರೆ ಅದು ಭೂಮಿಯಿಂದ ಮೇಲಕ್ಕೆದ್ದರೆ ಇದು ನೀರಿನಿಂದ ಮೇಲಕ್ಕೇಳುವದು. ಇಷ್ಟೇ ಭೇದ. —೨೧

೪ ಸ್ವರ್ಗದಿಂದ ಹಿಂದಿರುಗುವ ಜೀವನು ಆಕಾಶ ಮೊದಲಾದವುಗಳೊಡನೆ ಸೇರಿ ಬರುವನು (೨೨)

ಪೂ— ಸ್ವರ್ಗಕ್ಕೆ ಹೋದವರು ಹಿಂದಿರುಗುವಾಗ, ಸ್ವರ್ಗದಿಂದ ಆಕಾಶ, ಆಕಾಶದಿಂದ ವಾಯು, ಧೂಮ, ಅಭ್ರ, ಮೇಘ-ಮೊದಲಾದ ಲೋಕ ಗಳ ಮೂಲಕವಾಗಿ ಬರುತ್ತಾರಷ್ಟೆ. ಆ ಪುಣ್ಯವಂತರು ಅಲ್ಲಿ ಬರೀ ದಾರಿ ಹೋಕರೊ? ಅಥವಾ ಅಲ್ಲಿ ಅವರಿಗೆ ಭೋಗವೂ ಇದೆಯೊ?

ಸಿ— ಅವರಿಗೆ ಆ ಲೋಕಗಳ ಸಂಬಂಧವಾಗುವದೆಷ್ಟೋ ಅಷ್ಟೆ; ಭೋಗ ವಿಲ್ಲ. ಅವರ ಪರಲೋಕಸಾಧನವಾದ ಪುಣ್ಯಗಳೆಲ್ಲ ತೀರಿಹೋಗಿರು ವದರಿಂದ ಅವರಿಗೆ ಸಂಬಂಧ ಮಾತ್ರವಾಗುವದು. ಅವರು ಸ್ತ್ರೀಗರ್ಭಕ್ಕೆ ಸೇರುವ ತನಕ ಸ್ಥೂಲ ಶರೀರವಿಲ್ಲದ್ದರಿಂದ ಬರೀ ಸೂಕ್ಷ್ಮ ಶರೀರದಲ್ಲಿ ರುವ ಅವರಿಗೆ ಭೋಗಿಸುವ ಸಾಮರ್ಥ್ಯವೆ ಇರುವದಿಲ್ಲ. —೨೨

೫ ಆಕಾಶ ಮೊದಲಾದ ಲೋಕಗಳಲ್ಲಿ ತಡವಾಗುವದಿಲ್ಲ (೨೩)

ಸಿ— ಅವರು ಆಕಾಶ ಮೊದಲುಗೊಂಡು ಒಂದರಿಂದೊಂದು ಲೋಕಕ್ಕೆ ಬರುವವದರಲ್ಲಿ ತಡವಿಲ್ಲ. ಅವರು ಅಕ್ಕಿ, ಗೋಧಿ-ಮೊದಲಾದ ಧಾನ್ಯ ಗಳಲ್ಲಿ ಸೇರಿದ ಮೇಲೆ ಪುರುಷನೊಡನೆ ಸಂಬಂಧವಾಗುವದರಲ್ಲಿ ತಡ ವಾಗುವದು. —೨೩

೬ ಧಾನ್ಯಗಳಲ್ಲಿಯೂ ಬರೀ ಸಂಬಂಧವೆಷ್ಟೋ ಅಷ್ಟೇ ಹೊರತು ಭೋಗವಿಲ್ಲ (೨೪ ...೨೭)

ಸಿ— ಅಕ್ಕಿ, ಗೋಧಿ-ಮೊದಲಾದ ಧಾನ್ಯಗಳ ಜನ್ಮವನ್ನೇ ಪಡೆದ ಜೀವರು ಬೇರೆ ಇರುವರು. ಸ್ವರ್ಗದಿಂದಿಳಿದು ಬರುವವರು ಅವರ ಜೊತೆಯಲ್ಲಿ ಬಹುಕಾಲ ಇರುವದೆಷ್ಟೋ ಅಷ್ಟೇ ಹೊರತು ಅಲ್ಲಿಯ ಸುಖದುಃಖ ಗಳೇನೂ ಅವರಿಗಿಲ್ಲ. ಧಾನ್ಯಗಳ ಜನ್ಮವನ್ನೆ ಪಡೆದಿರುವವರಿಗೆ ಗಾಳಿ

ಬಿಸಿಲು, ಮಳೆ–ಮೊದಲಾದವುಗಳಿಂದ ಸುಖದುಃಖಗಳಾಗುತ್ತಿರುವವು. ಸ್ವರ್ಗದಿಂದಿಳಿದು ಬರುವ ಕರ್ಮಿಗಳು ಅಲ್ಲಿಯೂ ಬರೀ ದಾರಿಹೋಕರು. — ೨೪

**ಪೂ**— ಕರ್ಮಿಗಳು ಯಜ್ಞವನ್ನು ಮಾಡಿದಾಗ ದೇವತಾಪೂಜಾರೂಪವಾದ ಪುಣ್ಯದೊಡನೆ ಪಶುಹಿಂಸೆಯ ರೂಪವಾದ ಪಾಪವು ನಡೆದಿರುವದು. ಅವೆರಡರಲ್ಲಿ ಪುಣ್ಯವು ಸ್ವರ್ಗಲೋಕದ ಸುಖದಲ್ಲಿ ತೀರಿರುವದು. ಉಳಿದಿರುವ ಪಾಪದ ಫಲವನ್ನು ಅವರು ಧಾನ್ಯದ ಜನ್ಮದಲ್ಲಿ ಅನುಭವಿಸುವರೆಂದರೆ ಮಾತು ಹೊಂದುತ್ತದೆಯಲ್ಲ? —೨೫

ಸಿ— ಶ್ರುತಿಯು ಹೇಳುವ ಮಾತಿಗೆ ಪಾಪ ಉಂಟಾಗುವದಿಲ್ಲ. ಯಜ್ಞದಲ್ಲಿ ಪಶುಹಿಂಸೆಯು ಶ್ರುತಿಗೆ ಒಪ್ಪಾದದ್ದು. ಆದರಿಂದ ಕರ್ಮಿಗಳಿಗೆ ಧಾನ್ಯದ ಜನ್ಮವನ್ನು ಪಡೆದ ಜೀವರೊಡನೆ ಬರೀ ಸಂಬಂಧವೆ ಹೊರತು ಭೋಗವಿಲ್ಲ. —೨೫

,, ಧಾನ್ಯದ ಸಂಬಂಧವನ್ನು ಪಡೆದ ಜೀವರು ಅನ್ನದ ಮೂಲಕವಾಗಿ ಪುರುಷನ ಹೊಟ್ಟೆಯನ್ನು ಹೊಕ್ಕು ರೇತಸ್ಸಾಗುವರು. —೨೬

,, ಪುರುಷನ ಹೊಟ್ಟೆಯನ್ನು ಹೊಕ್ಕ ಕರ್ಮಿಗಳು ರೇತಸ್ಸಿನ ಮೂಲಕ ಸ್ತ್ರೀಯ ಗರ್ಭಕ್ಕೆ ಸೇರುವರು. —೨೭

---

## ಪಾದ ೨

### ಜೀವನ ಅವಸ್ಥೆಗಳೆಲ್ಲ ಸುಳ್ಳೆನ್ನುವದರ ಮೂಲಕ ಜೀವನನ್ನೂ ಈಶ್ವರನನ್ನೂ ಶೋಧನೆಮಾಡುವದು

---

೧ ಕನಸು ಬರೀ ತೋರಿಕೆ (೧...೬)

**ಪೂ**— ಕನಸಿನಲ್ಲಿ ಹುಟ್ಟುವ ಜಗತ್ತು ನಿಜವಾದದ್ದು. ಅಲ್ಲಿ ತೇರು, ದಾರಿ–ಮೊದಲಾದವುಗಳೆಲ್ಲ ಹುಟ್ಟುವವೆಂದು ಶ್ರುತಿಯೇ ಹೇಳುತ್ತದೆ. ಆದ್ದರಿಂದ ಕನಸಿನ ಜಗತ್ತಿನಂತೆ ಎಚ್ಚರದ ಜಗತ್ತು ಬರೀ ತೋರಿಕೆಯದೆಂದು ಹೇಳುವ ಮಾತು ನಿಲ್ಲುವದಿಲ್ಲ. —೧

,, ಕನಸಿನಲ್ಲಿ ಜೀವನು ತನ್ನ ಮನಸ್ಸಿಗೆ ಬಂದಂತೆ ಕನಸಿನ ಜಗತ್ತನ್ನು ಹುಟ್ಟಿಸುವನೆಂದು ಶ್ರುತಿ ಇದೆ. ಆದ್ದರಿಂದ ಆಗ ಕಾಣುವ ಹೆಂಡತಿ ಮಕ್ಕಳನ್ನೆಲ್ಲ ನಿಜವಾದವರನ್ನಾಗಿಯೆ ಒಪ್ಪಬೇಕು. ಅವರೆಲ್ಲ ಬರೀ ತೋರಿಕೆಯವರೆಂದರೆ ಜೀವನು ತನ್ನ ಮನಸ್ಸಿಗೆ ಬಂದಂತೆ ಮಾಡಿದನೆಂಬ ಮಾತು ಹೋಗುತ್ತದೆ. ಕಪ್ಪೇಚಿಪ್ಪಿನ ಬೆಳ್ಳಿಯೂ ಹಗ್ಗದ ಹಾವೂ ಕಲ್ಪಿಸುವವನ ಇಚ್ಛೆಗೆ ಅಧೀನವೆಂಬುದು ಲೋಕದಲ್ಲಿ ಕಂಡು ಬಂದಿದೆ. ಹೀಗೆ ಜೀವನು ಕನಸಿನಲ್ಲಿ ಜಗತ್ತನ್ನು ಹುಟ್ಟಿಸುವವನಾದ್ದರಿಂದ ಅವನು ಯಾವಾಗಲೂ ಪ್ರಪಂಚದೊಡನೆ ಕೂಡಿದವನಾಗುವನೇ ಹೊರತು ಪ್ರಪಂಚದ ಸೋಂಕಿಲ್ಲದ ಬ್ರಹ್ಮವಾಗುವದಿಲ್ಲ. —೨

ಸಿ— ಕನಸಿನ ಜಗತ್ತು ಸುಳ್ಳಾದದ್ದು. ಏಕೆಂದರೆ ಅದು ಮಾಡುವವನು, ಮಾಡುವ ಸಾಧನ--ಇವುಗಳ ಸೇರಿಕೆಯಿಂದ ಎದ್ದುಕೊಂಡದ್ದಲ್ಲ. ಕನಸಿನಲ್ಲಿ ಜಗತ್ತಿನ ಹುಟ್ಟುವಿಕೆಗೆ ಬೇಕಾದ ಯಾವ ಸಾಧನವೂ ಇರುವದಿಲ್ಲ. ಕನಸಿನಲ್ಲಿ ಕಾಣುವ ತೇರು ಮೊದಲಾದವುಗಳು ಕಪ್ಪೇಚಿಪ್ಪಿನ ಬೆಳ್ಳಿಯಂತೆ ಬರೀ ತೋರಿಕೆಯವುಗಳೆ. ಕನಸಿನಲ್ಲಿ ತೇರು ಮೊದಲಾದವು ಹುಟ್ಟುವವೆಂದು ಶ್ರುತಿಯಲ್ಲಿ ಒಂದು ಮಾತು ಇದ್ದ ಮಾತ್ರಕ್ಕೆ ಅದು ನಿಜವಾಗುವದಿಲ್ಲ. ಹಾಗಾದರೆ ಕಲ್ಲು ತೇಲುವದೆಂದರೂ ನಿಜವಾಗಬೇಕಾದೀತು. ಶ್ರುತಿಯು ಯಾವದನ್ನು ಹೇಳಬೇಕೆಂಬ ತಾತ್ಪರ್ಯದಿಂದ ಹೇಳುವದೊ ಅದು ಮಾತ್ರ ಸತ್ಯವಾದದ್ದು. ಕನಸಿನ ಜಗತ್ತನ್ನು ವಿವರಿಸುವದು ಶ್ರುತಿಯ ತಾತ್ಪರ್ಯವಲ್ಲ. ಅಲ್ಲಿ ನಿಜವಾದ ತೇರು ಮೊದಲಾದವುಗಳಿಲ್ಲವೆಂದು ಹಿಂದಿನ ವಾಕ್ಯದಲ್ಲಿಯೇ ಹೇಳಿದೆ. ಜೀವನು ತನಗೆ ತೋರಿದ್ದನ್ನೆಲ್ಲ ಹುಟ್ಟಿಸುವವನೆಂಬ ಮಾತೂ ಅಷ್ಟೆ. ಅದು ಲೋಕಾನುಭವಕ್ಕೆ ವಿರೋಧವಾದ ಮಾತು. ಅದನ್ನು ಹೇಳುವದು ಅದರ ತಾತ್ಪರ್ಯವಲ್ಲ. ಜೀವನು ತನ್ನ ಇಚ್ಛೆಯಂತೆಯೇ ಕನಸಿನ ಜಗತ್ತನ್ನು ಹುಟ್ಟಿಸುವದಾದರೆ ಕೆಟ್ಟ ಕನಸುಗಳೇಕಾದಾವು? —೩

,, ಕನಸಿನ ಜಗತ್ತು ಮುಂದೆ ಆಗುವ ಒಳ್ಳೆ ಮತ್ತು ಕೆಟ್ಟ ಫಲಗಳನ್ನು ಸೂಚಿಸುವವು. ಮುಂದಿನ ಕೇಡನ್ನು ಸೂಚಿಸುವ ಗಂಧರ್ವನಗರ ಮೊದಲಾದವುಗಳೆಲ್ಲ ಸುಳ್ಳಾದವುಗಳಾಗಿರುವವೆಂಬ ಲೋಕ ಪ್ರಸಿ

ದ್ಧಿಯ ಮೇಲೆ ಕನಸಿನ ಜಗತ್ತನ್ನು ಸುಳ್ಳೆಂದು ತಿಳಿಯಬೇಕು. ಅದ್ದ ರಿಂದ ಕನಸಿನ ಜಗತ್ತಿನಂತೆ ಎಚ್ಚರದ ಜಗತ್ತು ಸುಳ್ಳಾದದ್ದೆಂಬುದೂ ಜೀವನು ಪ್ರಪಂಚದ ಸೋಂಕಿಲ್ಲದ ಬ್ರಹ್ಮನೆಂಬುದೂ ಸರಿಗೆ ನಿಂತ ಮಾತು. ಕನಸೆಂಬ ಅವಸ್ಥೆಯು ಸುಳ್ಳಾದ ಮೇಲೆ ಗಾಢನಿದ್ರೆ, ಎಚ್ಚರ, ಮೂರ್ಛೆ-ಮೊದಲಾದವುಗಳೂ ಇದರಂಥವುಗಳೆ ಎಂದು ತಿಳಿಯ ಬೇಕು. -- ೪

ಪೂ— ಜೀವನೂ ಬ್ರಹ್ಮನೂ ಒಂದೇ ಆದರೆ ಜೀವನಲ್ಲಿ ಆನಂದ ಮೊದ ಲಾದ ರೂಪಗಳು ಯಾವಾಗಲೂ ಏಕೆ ಕಾಣುವದಿಲ್ಲ?

ಸಿ— ಅವನು ದೇಹ, ಇಂದ್ರಿಯ-ಮೊದಲಾದವುಗಳನ್ನೆ ತಾನೆಂದು ತೊಳ ಲುತ್ತ ಈಶ್ವರನನ್ನು ತಿಳಿಯದೆ ಇರುವದರಿಂದ ಅವನ ಆನಂದ ಮೊದ ಲಾದ ಸ್ವರೂಪಗಳು ಮರೆಯಾಗಿ ತಾನುಮಾಡುವವನೆಂಬ ಮತ್ತು ಅನು ಭವಿಸುವವನೆಂಬ ವಿರುದ್ಧ ಭಾವನೆಗಳು ಬಂದು ಕಾಲು ಚಾಚಿಕೊಂಡು ಬಂಧ ಉಂಟಾಗಿರುವದು. ಈಶ್ವರನನ್ನು ತಿಳಿದರೆ ಮೋಕ್ಷ. —೫

,, ಜೀವನು ನಿಜವಾಗಿ ಜ್ಞಾನಾನಂದರೂಪನಾದರೂ ದೇಹ ಮೊದ ಲಾದವುಗಳೆ ತಾನೆಂಬ ಭಾವನೆಯ ಬಲದಿಂದಲೆ ಜೀವಭಾವನ್ನೂ ಬಂದಿ ರುವದು. - ೬

ಜೀವನು ಗಾಢನಿದ್ರೆಯಲ್ಲಿ ಬ್ರಹ್ಮದಲ್ಲಿಯೇ ಸೇರಿರುವನು (೭-೮)

ಸಿ— ಜೀವನೆಂಬ ರಾಜನು ಎಚ್ಚರದಲ್ಲಿ ದೇಹ ಮೊದಲಾದವುಗಳ ಮೇಲಿನ ಅಭಿಮಾನದಿಂದ ಕೂಡಿದ್ದು ಗಾಢನಿದ್ರೆಯಲ್ಲಿ ಆ ಅಭಿಮಾನ ವಿಲ್ಲದವನಾಗಿ ನಾಡಿ, ಹೃದಯ-ಮೊದಲಾದ ದ್ವಾರಗಳನ್ನು ದಾಟಿ ಹೃದಯದೊಳಗಿರುವ ಬ್ರಹ್ಮವೆಂಬ ಮೇಲುಮಹಡಿಯಲ್ಲಿ ಮಲಗು ತ್ತಾನೆ. ಜೀವನೆಂಬ ರಾಜನು ಎಚ್ಚರಕನಸುಗಳಲ್ಲಿ ಅಲ್ಲಲ್ಲಿ ಕಂಡ ತನ್ನ ದೇಶಗಳಲ್ಲೆಲ್ಲ ಸುತ್ತಿ ಶರೀರವೆಂಬ ಪಟ್ಟಣವನ್ನು ಹೊಕ್ಕು ನಾಡಿ ಯಲ್ಲಿ ತೂರಿ ಹೃದಯಕ್ಕೆ ಸೇರಿ ಬ್ರಹ್ಮದಲ್ಲಿರುವನು. —೭

,, ಬ್ರಹ್ಮದಲ್ಲಿ ಮಲಗಿದ್ದ ಜೀವನು ನಿದ್ರೆ ಮುಗಿದ ಮೇಲೆ ದೇಹ ಮೊದಲಾದವುಗಳ ಮೇಲಿನ ಅಭಿಮಾನವು ತಲೆ ಎತ್ತಲಾಗಿ ಬ್ರಹ್ಮದಿಂದ ಎದ್ದು ಎಚ್ಚರದ ಜಗತ್ತನ್ನು ನೋಡುವದಕ್ಕಾಗಿ ಹೃದಯ, ನಾಡಿ-

ಮೊದಲಾದ ಪ್ರಾಕಾರಗಳ ಮೂಲಕ ಶರೀರವೆಂಬ ಪುರದಿಂದ ಹೊರ ಬೀಳುತ್ತಾನೆ. —೮

೩ ಮಲಗಿದ ಜೀವನೇ ಏಳುತ್ತಾನೆ (೯)

**ಪೂ**— ಗಾಢನಿದ್ರೆಯಲ್ಲಿ ಜೀವನು ಬ್ರಹ್ಮದಲ್ಲಿ ಸೇರಿದ ಮೇಲೆ ಮರುದಿನ ಅವನೇ ಮತ್ತೆ ಏಳುವನೋ ಅಥವಾ ಅವನು ಬ್ರಹ್ಮದಲ್ಲಿ ಒಂದಾಗಿ ಹೋದದ್ದರಿಂದ ಮತ್ತೊಬ್ಬ ಜೀವನು ಏಳುವನೊ?

**ಸಿ**— ಹಿಂದಿನ ದಿನ ಬ್ರಹ್ಮದಲ್ಲಿ ಮಲಗಿದವನೆ ಮರುದಿನ ಏಳುತ್ತಾನೆ. ಆದ್ದರಿಂದಲೆ ಅವನಿಗೆ ಹಿಂದಿನ ದಿನದ ಕೆಲಸಗಳೆಲ್ಲ ನೆನಪಿಗೆ ಬರುತ್ತವೆ. ದಿನಕ್ಕೊಬ್ಬೊಬ್ಬ ಬೇರೆಬೇರೆ ಜೀವರು ಎದ್ದರೆ ಯಜ್ಞ ಮೊದಲಾದವುಗಳನ್ನು ಮಾಡಿದವನೊಬ್ಬನಾಗಿಯೂ ಅದರಫಲವನ್ನನುಭವಿಸುವವನು ಬೇರೊಬ್ಬನಾಗಿಯೂ ಆಗಬೇಕಾಗುತ್ತದೆ. ಬೇರೊಬ್ಬಜೀವನು ಎದ್ದರೆ ಹಿಂದಿನದಿನದ ಕೆಲಸಗಳ ನೆನಪು ಅವನಿಗೆ ಆಗುವದಕ್ಕೆ ದಾರಿಇರುವದಿಲ್ಲ—೯

೪ ಮೂರ್ಛಿತನು ಅರ್ಧ ಅತ್ತಕಡೆಗೆ (೧೦)

**ಸಿ**— ಮೂರ್ಛಿತನಾದ ಜೀವನು ಹೃದಯದಲ್ಲಿರುವ ಬ್ರಹ್ಮದಲ್ಲಿ ಅರ್ಧ ಮಟ್ಟಿಗೆ ಸೇರುವನೆನ್ನಬೇಕಾಗುವದು. ಅವನು ಗಾಢನಿದ್ರೆಯುವನಂತೆ ಪೂರ್ಣವಾಗಿ ಒಂದಾಗಿರುವದಿಲ್ಲ. ಮೂರ್ಛಿತನಿಗೆ ಹೊರಗಣ ಪದಾರ್ಥಗಳ ಜ್ಞಾನವಿಲ್ಲದಿದ್ದರೂ ಒಳಗೆ ದುಃಖದ ಅರಿವು ಇದ್ದೇ ಇರುವದರಿಂದ ದೇಹ ಮೊದಲಾದವುಗಳ ಮೇಲಿನ ಅಭಿಮಾನವು ಸ್ವಲ್ಪಮಟ್ಟಿಗಾದರೂ ಇರುವದೆನ್ನಬೇಕಾಗುವದು. ಆದ್ದರಿಂದ ಮೂರ್ಛೆಯು ಎಚ್ಚರ, ಕನಸು, ನಿದ್ರೆ—ಎಂಬ ಮೂರವಸ್ಥೆಗಳಲ್ಲಿ ಯಾವದರಲ್ಲಿಯೂ ಸೇರುವದಿಲ್ಲ. ಇದೊಂದು ಆ ಮೂರಕ್ಕಿಂತ ಬೇರೆಯಾದ ಸಾವಿನದಾರಿಯೆಂದೇ ತಿಳಿಯಬೇಕು. —೧೦

೫ ಬ್ರಹ್ಮವು ಎರಡನೆಯದಿಲ್ಲದ್ದೆಂಬ ಒಂದೇ ಲಕ್ಷಣವುಳ್ಳದ್ದು (೧೧...೨೧)

**ಪೂ**— ಬ್ರಹ್ಮಕ್ಕೆ ಸಗುಣತ್ವವೂ ನಿರ್ಗುಣತ್ವವೂ ಹುಟ್ಟುಗುಣವಾಗಿ ನಿಜವಾಗಿರುವವೆಂದು ತೋರುವದು.

**ಸಿ**— ಜೀವನು ಪ್ರಪಂಚದ ಸೋಂಕಿಲ್ಲದವನೆಂದು ತೋರಿಸಿದ್ದಾಯಿತಷ್ಟೆ. ಈಗ ಬ್ರಹ್ಮವು ಪ್ರಪಂಚದ ಸೋಂಕಿಲ್ಲದ್ದೆಂದು ತೋರಿಸಲಾಗುವದು.

ಬ್ರಹ್ಮಕ್ಕೆ ಸಗುಣತ್ವವೂ ನಿರ್ಗುಣತ್ವವೂ ಎರಡೂ ಹುಟ್ಟುಗುಣವಾಗಲಾರವು. ಒಂದಕ್ಕೊಂದು ವಿರೋಧವಾದವುಗಳಾದ ಆವೆರಡೂ ಒಂದು ಕಡೆ ಹೇಗೆ ಇದ್ದಾವು? --೧೧

**ಪೂ**— ನಿರ್ಗುಣತ್ವವು ಹುಟ್ಟುಗುಣವಾಗಿ ನಿಜವಾಗಿರಲಿ. ಸಗುಣತ್ವವು ಹುಟ್ಟುಗುಣವಾಗದಿದ್ದರೂ ಪೃಥ್ವಿ ಮೊದಲಾದ ಉಪಾಧಿಗಳಿಂದ ಏರ್ಪಟ್ಟದ್ದಾಗುವದು. ಆ ಪೃಥ್ವಿ ಮೊದಲಾದವು ನಿಜವಾಗಿರತಕ್ಕವುಗಳಾದ್ದರಿಂದ ಸಗುಣತ್ವವೂ ನಿಜವಾಗಿರತಕ್ಕದ್ದಾಗುವದು.

**ಸಿ**— ಅದೂ ಆಗುವದಿಲ್ಲ. ಆ ಉಪಾಧಿಗಳಿಂದ ಕೂಡಿದ ಸಗುಣತ್ವವೂ ನಿಜವಾದದ್ದಲ್ಲ. ಪೃಥ್ವಿ ಮೊದಲಾದವುಗಳೆಲ್ಲ ಸುಳ್ಳಾದವುಗಳು. ಆದ್ದರಿಂದ ಅವರಿಂದ ತೋರುವ ಸಗುಣತ್ವವು ಸುಳ್ಳಾದದ್ದು. ಪೃಥ್ವಿ ಮೊದಲಾದವುಗಳೆಲ್ಲ ಸುಳ್ಳಾದವುಗಳೆಂದು ಎಲ್ಲ ಶ್ರುತಿಗಳೂ ಹೇಳುತ್ತವೆ. --೧೧

**ಪೂ**— 'ಆವನು ಸರ್ವಕರ್ಮನು, ಸರ್ವಕಾಮನು' ಎಂದು ಮುಂತಾಗಿ ಸಗುಣವನ್ನು ಹೇಳುವ ಶ್ರುತಿಗಳಿರುವದರಿಂದ ಸಗುಣತ್ವವೇ ನಿಜವಾದದ್ದೆನ್ನಬೇಕಾಗುವದು. ೧೨

**ಸಿ**— ಉಪಾಧಿಗಳು ಬೇರೆ ಬೇರೆ ಇದ್ದರೂ ಆಕಾಶದಂತೆ ಚೈತನ್ಯವು ಒಂದೇ ಎಂಬರ್ಥವನ್ನು ಬಹುಶ್ರುತಿಗಳು ಹೇಳುವದರಿಂದ ನಿರ್ಗುಣತ್ವವೆ ನಿಜವಾದದ್ದು. —೧೨

,, ಕೆಲವು ಶಾಖೆಯವರು ಭೇದವನ್ನು ಇಲ್ಲವೆನ್ನುವದರ ಮೂಲಕವಾಗಿ ನಿರ್ಗುಣತ್ವವನ್ನೇ ಹೇಳುವರು. — ೧೩

,, ಶ್ರುತಿಗಳಲ್ಲಿ ನಿರ್ಗುಣತ್ವವೂ ಸಗುಣತ್ವವೂ ಎರಡೂ ಇದ್ದರೂ ನಿರ್ಗುಣತ್ವವೆ ಮುಖ್ಯ. ಆರಂಭವಾಡಿರುವದು, ಕೊನೆಗಾಣಿಸಿರುವದು- ಮೊದಲಾದ ಲಿಂಗಗಳಿಂದ ನೋಡಿದರೆ ನಿರ್ಗುಣತ್ವವೆ ತಾತ್ಪರ್ಯವಾಗಿ ಕಾಣುವದು. ಸಗುಣತ್ವವನ್ನು ಹೇಳುವ ಮಾತುಗಳು ತಾತ್ಪರ್ಯದಿಂದ ಹೇಳಿದವುಗಳಲ್ಲ. -- ೧೪

**ಪೂ**— ಸಗುಣತ್ವವು ಸುಳ್ಳಾದದ್ದಾದರೆ ಸಗುಣಬ್ರಹ್ಮದ ಉಪಾಸನೆಯಿಂದ ಆ ಉಪಾಸಕನಿಗೆ ಬ್ರಹ್ಮಲೋಕವು ದೊರೆಯುವದೆಂಬ ಮುಂತಾದ

ಮಾತುಗಳಿಗೆಲ್ಲ ಅರ್ಥವಿಲ್ಲದೆ ಹೋಗುತ್ತದೆ. ಸುಳ್ಳಾದ ಗುಣಗಳಿಂದ ಕೂಡಿದ್ದನ್ನು ಉಪಾಸನೆಮಾಡಿದರೆ ಅದಕ್ಕೊಂದು ಫಲವು ಹೇಗೆ ಉಂಟಾದೀತು ?

ಸಿ— ಗವಾಕ್ಷಿಯಿಂದ ಬರುವ ಬಿಸಲಿಗೆ ಗವಾಕ್ಷಿಯ ಸಂಬಂಧದಿಂದ ಉದ್ದ, ದುಂಡು- ಮೊದಲಾದ ಸುಳ್ಳು ಧರ್ಮಗಳುಂಟಾಗಿದ್ದರೂ ಆದರಿಂದ ಕತ್ತಲೆಯೂ ಚಳಿಯೂ ಹೋಗುವದುಂಟು. ಹೀಗೆ ಪೃಥ್ವಿ ಮೊದಲಾದವುಗಳ ಸಂಬಂಧದಿಂದ ಸುಳ್ಳುಗುಣಗಳುಂಟಾದ ಬ್ರಹ್ಮವನ್ನು ಉಪಾಸನೆ ಮಾಡಿದರೂ ಬ್ರಹ್ಮಲೋಕವೆಂಬ ಫಲ ಉಂಟಾಗಬಹುದು. ಸಗುಣೋಪಾಸನೆಯ ವಾಕ್ಯಗಳು ವ್ಯರ್ಥವೇನೂ ಅಲ್ಲ. —೧೫

,, ಬ್ರಹ್ಮವು ಕೇವಲ ನಿರ್ಗುಣವೆಂದು ಶ್ರುತಿಗಳು ಹೇಳಿಯೇ ಹೇಳುವವು. —೧೬

,, ಸ್ಮೃತಿಗಳೂ ಬ್ರಹ್ಮದ ನಿರ್ಗುಣತ್ವಕ್ಕೆ ಬೆಂಬಲವನ್ನು ಕೊಡುವವು. —೧೭

,, ಸಗುಣಸ್ವರೂಪವು ನೀರಿನಲ್ಲಿ ಬಿದ್ದಿರುವ ಸೂರ್ಯಚಂದ್ರರ ಪ್ರತಿಬಿಂಬಕ್ಕೆ ಸಮಾನವೆಂದು ಶ್ರುತಿಸ್ಮೃತಿಗಳು ಹೇಳುವವು. ಜಲದಲ್ಲಿ ಬಿದ್ದ ಪ್ರತಿಬಿಂಬಕ್ಕೆ ಜಲದ ಉಬ್ಬು, ಅಲುಗಾಡಿಕೆ-ಮೊದಲಾದ ಧರ್ಮಗಳನ್ನು ಆರೋಪಿಸುವಂತೆ ಪೃಥ್ವಿ-ಮೊದಲಾದವುಗಳಲ್ಲಿ ಪ್ರತಿಬಿಂಬಿತನಾದ ಪರಮಾತ್ಮನಿಗೆ ಪೃಥ್ವಿ ಮೊದಲಾದವುಗಳ ಸರ್ವಗಂಧತ್ವ ಮೊದಲಾದ ಧರ್ಮಗಳನ್ನು ಆರೋಪಿಸುವದುಂಟು. ಆರೋಪಿತವಾದವುಗಳೆಲ್ಲ ಸುಳ್ಳಾದವುಗಳಾದ್ದರಿಂದ ಸಗುಣತ್ವವು ನಿಜವಾದದ್ದಲ್ಲ. —೧೮

ಪೂ— ನೀರಿನಂತೆ ಪೃಥ್ವಿ ಮೊದಲಾದವುಗಳು ಸ್ವಚ್ಛವಾದವುಗಳಲ್ಲದ್ದರಿಂದ ಅವುಗಳಲ್ಲಿ ಬ್ರಹ್ಮವು ಪ್ರತಿಬಿಂಬಿಸುವದೆನ್ನುವ ಮಾತು ಒಪ್ಪುವದಿಲ್ಲ. —೧೯

ಸಿ— ನೀರಿನಲ್ಲಿ ಹೇಗೋ ಹಾಗೆ ಪ್ರತಿಬಿಂಬಿಸದಿದ್ದರೂ ಅದು ಪೃಥ್ವಿ ಮೊದಲಾದವುಗಳನ್ನೆಲ್ಲ ಬೆಳಗುವದಾಗಿ ಅವೆಲ್ಲವುಗಳೊಳಗೂ ಇದ್ದೇ ಇರುವದು. ಆದ್ದರಿಂದ ಪೃಥ್ವಿಯ ಧರ್ಮ ಮೊದಲಾದವುಗಳನ್ನು ಅದರಲ್ಲಿ ಆರೋಪಿಸಲಾಗುವದು. ಇಷ್ಟು ಮಾತ್ರದಿಂದ ಸೂರ್ಯಚಂದ್ರರ ಪ್ರತಿಬಿಂಬದ

ಹೋಲಿಕೆ ಒಪ್ಪುವುದು. ಪೃಥ್ವಿ ಮೊದಲಾದವುಗಳಲ್ಲಿ ಬ್ರಹ್ಮನ ಪ್ರತಿಬಿಂಬವೆಂಬವನ್ನು ಗೌಣವಾಗಿ ತಿಳಿಯಬೇಕು. —೨೦

ಎಲ್ಲ ಜೀವರ ಅಂತಃಕರಣಗಳೂ ಸ್ವಭಾವವಾಗಿ ಸ್ವಚ್ಛವಾದವುಗಳಾದ್ದರಿಂದ ಅವರಲ್ಲಿ ಪ್ರತಿಬಿಂಬಿತವಾದ ಬ್ರಹ್ಮದಲ್ಲಿ ಸತ್ಯಕಾಮ ಮೊದಲಾದ ಸುಳ್ಳು ಧರ್ಮಗಳನ್ನು ಆರೋಪಿಸಲಾಗುವದ್ದರಿಂದ ಸೂರ್ಯ ಚಂದ್ರರಂತೆ ಬ್ರಹ್ಮಕ್ಕೆ ಮುಖ್ಯಪ್ರತಿಬಿಂಬವೂ ಉಂಟೆಂದು ತಿಳಿಯಬೇಕು. —೨೧

೬ ಜಗತ್ತೆಂಬುದಿಲ್ಲ; ಇರುವದು ಬ್ರಹ್ಮ ಒಂದೆ (೨೨..೩೦)

ಸಿ— ಇದೇ ಬ್ರಹ್ಮದ ರೂಪೆಂದು ಹೇಳುವದಕ್ಕೆ ಹೊರಟು ಶ್ರುತಿಯು 'ಇದಲ್ಲ, ಇದಲ್ಲ'ವೆಂದು ಹೇಳುವದರ ಮೂಲಕ ರೂಪುಳ್ಳ ಮತ್ತು ರೂಪಿಲ್ಲದ ಜಗತ್ತನ್ನು ಮಾತ್ರ ಹೊರತು ಮಾಡಿ ನಿಜವಾದದ್ದೆಂದು ಕಾಣುತ್ತಿರುವ ಈ ಜಗತ್ತಿಗೆ ಆಧಾರವಾಗಿ ನಿಜವಾದ ಬ್ರಹ್ಮವಿರುವದೆಂದು ಹೇಳಿದೆ. ಅಲ್ಲಿ ಹೇಳಿರುವ ತಾತ್ಪರ್ಯವೇನೆಂದರೆ: ನಿಜವಾದ ರೂಪಿಲ್ಲದ ಬ್ರಹ್ಮಕ್ಕೆ ಸುಳ್ಳಾದ ಎರಡು ರೂಪಗಳಿವೆ: (೧) ಭೂಮಿ, ನೀರು, ಅಗ್ನಿ-ಎಂಬ ಮೂರು ರೂಪುಳ್ಳ ಭೂತಗಳು; (೨) ವಾಯು ಮತ್ತು ಆಕಾಶ-ಎಂಬೆರಡು ರೂಪಿಲ್ಲದ ಭೂತಗಳು. ಇವೆರಡನ್ನು ಹೊರತು ಮಾಡಿ ಶ್ರುತಿಯು ಇವುಗಳ ಆಧಾರವಾದ ಬ್ರಹ್ಮವನ್ನು ತೋರಿಸಿದೆ. —೨೨

ಪೂ— ಜಗತ್ತಿಗೆಲ್ಲ ಆಧಾರವಾಗಿ ಬ್ರಹ್ಮವನ್ನೊಪ್ಪಿದರೆ ಬ್ರಹ್ಮವು ವ್ಯಾಪಕವಾದದ್ದಾದ್ದರಿಂದ ಎಲ್ಲೆಲ್ಲಿಯೂ ಇರುವದಾಗಿದ್ದು ಎಲ್ಲ ಜೀವರ ಮನಸ್ಸಿಗೂ ಗೋಚರವಾಗಬೇಕಲ್ಲ!

ಸಿ— ಅದು ಇಂದ್ರಿಯಗಳಿಗೆ ಗೋಚರವಾಗತಕ್ಕ ಸ್ವರೂಪದ್ದಲ್ಲ. ಆದ್ದರಿಂದ ಯಾರ ಮನಸ್ಸಿಗೂ ಗೋಚರವಾಗುವದಿಲ್ಲ. ನಮ್ಮ ಕಣ್ಣಿಗೂ ಸೂರ್ಯನಿಗೂ ನಡುವೆ ಮಂಜು ಕವಿದಿದ್ದರೆ ಸೂರ್ಯನು ಕಾಣದಿರುವಂತೆ ನಮಗೂ ಬ್ರಹ್ಮಕ್ಕೂ ನಡುವೆ ಪರಮಾತ್ಮಸ್ವರೂಪದ ಅರಿವಿಲ್ಲದಿರುವಿಕೆಯೆಂಬ ಮರೆ ಕವಿದಿದೆ. ಆದ್ದರಿಂದ ಬ್ರಹ್ಮವು ಗೋಚರವಾಗುವದಿಲ್ಲ. —೨೩

ಸಿ— ಯಾರು ಪರಮಾತ್ಮ ಸ್ವರೂಪದ ಅರಿವಿಲ್ಲದಿರುವಿಕೆಯೆಂಬ ಮರೆಯನ್ನು ಹಾರ ಹೊಡೆದು ಪರಮಾತ್ಮನನ್ನು ನೋಡುವರೊ ಆ ಶುದ್ಧವಾದ ಮನಸ್ಸುಳ್ಳ ಜ್ಞಾನಿಗಳಿಗೆ ಧ್ಯಾನಕಾಲದಲ್ಲಿ ಸಾಕ್ಷಾತ್ಕಾರವಾಗುವದೆಂದು ಶ್ರುತಿಗಳು ಹೇಳುವವು. ಪರಮಾತ್ಮನು ಮನಸ್ಸಿಗೆ ಗೋಚರವಾಗುವದಿಲ್ಲವೆಂದರೆ ಅಶುದ್ಧವಾದ ಮನಸ್ಸಿಗೆ ಗೋಚರವಾಗುವದಿಲ್ಲವೆಂದರ್ಥ. —೨೪

,, ಗವಾಕ್ಷಿಯಿಂದ ಬಂದಿರುವ ಬೆಳಕೂ ಹೊರಗಣ ಬೆಳಕೂ ಒಂದೆ ಆಗಿರುವಂತೆ ಜೀವನೂ ಬ್ರಹ್ಮವೂ ಒಂದೆ. ಹೀಗಿದ್ದರೂ ಮಾಯೆಯಿಂದಾಗಿರುವ ಸ್ಥೂಲಸೂಕ್ಷ್ಮಶರೀರಗಳ ಸಂಬಂಧದ ಆವೇಶದಿಂದ ನಾನು ಬ್ರಹ್ಮವಲ್ಲವೆಂದು ತೋರುತ್ತಿರುವದು. ಜೀವನನ್ನು ಕುರಿತು ನೀನು ಬ್ರಹ್ಮವೆಂದು ಬಹು ಶ್ರುತಿಗಳು ಹೇಳಿವೆ. —೨೫

,, ಜೀವನು ಸ್ಥೂಲ ಸೂಕ್ಷ್ಮ ಶರೀರಗಳ ಅಭಿಮಾನವನ್ನು ಕಳೆದುಕೊಂಡ ಮೇಲೆ ಶುದ್ಧನಾಗಿ ಮುಖ್ಯವಾದ ಭೇದಭಾವನೆಯನ್ನು ದೂರ ಮಾಡಿ ತಾನೆ ಬ್ರಹ್ಮನಾಗುವನು. ಶುದ್ಧವಾದ ನೀರು ಶುದ್ಧವಾದ ನೀರಿನಲ್ಲಿ ಬೆರೆತು ಒಂದಾದಂತೆ ಶುದ್ಧನಾದ ಜೀವನು ಜ್ಞಾನವನ್ನು ಹೊಂದಿ ಶುದ್ಧವಾದ ಬ್ರಹ್ಮನೊಡನೆ ಒಂದಾಗುವನು. —೨೬

ಪೂ— "ಶ್ರುತಿಯು ಭೇದವನ್ನೂ ಹೇಳುತ್ತದೆ; ಅಭೇದವನ್ನೂ ಹೇಳುತ್ತದೆ. ಆದ್ದರಿಂದ ಎರಡನ್ನೂ ಒಪ್ಪಬೇಕು. ಹಾವು ಸುರುಳಿ ಸುತ್ತಿಕೊಂಡೂ ಇರುವದುಂಟು; ಉದ್ದವಾಗಿಯೂ ಇರುವದುಂಟು. ಹೀಗೆ ಭೇದವೂ ಅಭೇದವೂ ಎರಡೂ ನಿಜ. ಜೀವನೂ ಬ್ರಹ್ಮವೂ ಜ್ಞಾನಸ್ವರೂಪದಲ್ಲಿ ಒಂದಾದರೂ ಪರಿಮಾಣದಲ್ಲಿ ಜೀವನು ಅಣು; ಬ್ರಹ್ಮವು ವ್ಯಾಪಕವಾದದ್ದು. ಮೋಕ್ಷವಾಗುವ ತನಕ ಜೀವಬ್ರಹ್ಮರ ಭೇದವು ನಿಜವಾದದ್ದೆ. ಅಭೇದದ ಸಾಕ್ಷಾತ್ಕಾರವಾದರೆ ಮೋಕ್ಷಕಾಲದಲ್ಲಿ ಜೀವಬ್ರಹ್ಮರಿಬ್ಬರೂ ಒಂದೆ."–ಹೀಗೆಂದು ಭಟ್ಟಭಾಸ್ಕರರು ಹೇಳುತ್ತಾರಲ್ಲ! —೨೭

,, ಗವಾಕ್ಷಿಯ ಬೆಳಕೂ ಹೊರಗಣ ಬೆಳಕೂ ಬೆಳಕೆಂಬ ದೃಷ್ಟಿಯಿಂದ ಒಂದಾದರೂ ಹೊರಗಣ ಬೆಳಕು ಹರಡಿಕೊಂಡಿರುವದು;

ಗವಾಕ್ಷಿಯ ಬೆಳಕು ಒಂದು ಸಣ್ಣ ಆಕೃತಿಯುಳ್ಳದಾಗಿರುವದು. ಆದ್ದರಿಂದ ಭೇದಾಭೇದಗಳೆರಡನ್ನೂ ಒಪ್ಪಬೇಕು. —೨೮

ಸಿ— ಹಿಂದೆ ಹೇಳಿದಂತೆ ಗವಾಕ್ಷಿಯ ಬೆಳಕೂ ಹೊರಗಣ ಬೆಳಕೂ ಎರಡೂ ಒಂದೆಂಬುದೇ ನಿಜವಾದದ್ದು. ಭೇದದಿಂದಾದ ಎರಡು ಪರಿಮಾಣಗಳು ಸುಳ್ಳಾದವುಗಳೆ. ಜೀವನಿಗೆ ಸುಳ್ಳಾದ ಸೂಕ್ಷ್ಮಶರೀರದ ಸಂಬಂಧದಿಂದ ಅಣುತ್ವ ; ಬ್ರಹ್ಮಕ್ಕೆ ಸುಳ್ಳಾದ ಮಾಯೆಯ ಸಂಬಂಧದಿಂದ ಮಹತ್ತ್ವ ; ಆದ್ದರಿಂದ ಎರಡೂ ನಿಜವಲ್ಲ. —೨೯

,, ಸುರುಳಿಸುತ್ತಿದ ಮತ್ತು ಉದ್ದವಾದ ಹಾವಿನ ದೃಷ್ಟಾಂತವನ್ನು ತೆಗೆದುಕೊಂಡರೂ ಅಭೇದವೇ ನಿಜವಾದದ್ದು ; ಭೇದವು ಸುಳ್ಳಾದದ್ದು. ಅವೆರಡೂ ಕೂಡಿರುವದು ಹೇಗೆ? ಬ್ರಹ್ಮಕ್ಕಿಂತ ಬೇರೆಯಾದ ಜೀವನೇ ಇಲ್ಲವೆಂದು ಶ್ರುತಿ ಹೇಳಿದೆ. ಭಟ್ಟಭಾಸ್ಕರರು ಭೇದವನ್ನೂ ಪ್ರಮಾಣವೆಂದೊಪ್ಪುತ್ತಾರಷ್ಟೆ. ಅಭೇದವನ್ನು ಹೇಳುವಾಗ ಆ ನಿಜವಾದ ಭೇದವನ್ನು ಕಳೆಯುವದು ಹೇಗೆ? ನಮ್ಮ ಮತದಲ್ಲಿ ಭೇದವು ಭ್ರಮೆಯಾದ್ದರಿಂದ ಕಳೆಯುವದಕ್ಕಾಗುತ್ತದೆ. ಅಭೇದ ಜ್ಞಾನವು ಬಂದು ಭೇದ ಜ್ಞಾನವನ್ನು ಕಳೆಯುವದೆಂದರೆ ಅವೆರಡೂ ಏಕಕಾಲದಲ್ಲಿ ಒಂದೆಡೆಯಲ್ಲಿರುವದು ಹೇಗೆ? ಆದ್ದರಿಂದ ಅಭೇದಜ್ಞಾನವು ಬಂದು ಭೇದ ಜ್ಞಾನವನ್ನು ಕಳೆಯುವದೆಂಬ ಮಾತು ನಿಲ್ಲುವದಿಲ್ಲ. ಅಭೇದಜ್ಞಾನವು ಭೇದಜ್ಞಾನವನ್ನು ಕಳೆಯುವದೆಂಬ ಮಾತಿನಲ್ಲಿ ಅನ್ಯೋನ್ಯಾಶ್ರಯ ದೋಷವಿರುವದು. ಅಭೇದಜ್ಞಾನವೆಂದರೆ ಭೇದವಳಿದು ಹೋದ ಮೇಲಿನ ಜ್ಞಾನ. ಅದರಿಂದ ಭೇದಜ್ಞಾನವು ಹೋಗುವದೆಂದರೆ ಒಂದಕ್ಕೊಂದಾಶ್ರಯವಾಗುವದು. ಇದು ಸರಿಯಲ್ಲ. —೩೦

೭ ಪರಮಾತ್ಮನನ್ನು ಸೇತುವೆಂದಿರುವದು ಗೌಣ (೩೧–೩೭)

ಪೂ— ಅತ್ಯಂತ ಭೇದವಾದಿಗಳಾದ ನೈಯಾಯಿಕರು ಹೇಳುವದೇನೆಂದರೆ: ಜೀವನು ಬ್ರಹ್ಮಗಿಂತ ಬೇರೆ ಎನ್ನಲೇಬೇಕು. ಬ್ರಹ್ಮನು ಅಪ್ಪಣೆಯನ್ನು ಮಾಡುವವನೆಂದೂ ಜೀವನು ಅದನ್ನು ತಲೆಯ ಮೇಲೆ ಹೊತ್ತು ನಡೆಸುವವನೆಂದೂ ಬ್ರಹ್ಮನನ್ನು ಸೇತುವೆಂದು ಹೇಳಿರುವದೊಂದು ; ಜೀವನು ಕೂಡಲ ಕೊನೆಯ ನೂರರಲ್ಲೊಂದಂಶದಷ್ಟಿರು

ವನನೆಂದೂ ಬ್ರಹ್ಮನು ಎಲ್ಲೆಲ್ಲಿಯೂ ತುಂಬಿಕೊಂಡು ಯಾವಾಗಲೂ ಇರುವವನೆಂದೂ ಪರಿಮಾಣವನ್ನು ಹೇಳಿರುವದಿನ್ನೊಂದು ; ಗಾಢನಿದ್ರೆಯಲ್ಲಿ ಜೀವನು ಬ್ರಹ್ಮದೊಡನೆ ಕೂಡುವನೆಂದು ಸಂಬಂಧವನ್ನು ಹೇಳಿರುವದು ಮತ್ತೊಂದು ; ಎರಡು ಪಕ್ಷಿಗಳ ರೂಪಕವನ್ನು ಕೊಟ್ಟು ಹೇಳಿರುವ ಶ್ರುತಿಯಲ್ಲಿ ಬ್ರಹ್ಮದಿಂದ ಜೀವನನ್ನು ಬೇರೆ ಮಾಡಿ ಹೇಳಿರುವದು ಮಗದೊಂದು--ಈ ನಾಲ್ಕು ಕಾರಣಗಳಿಂದ ಜೀವನೂ ಬ್ರಹ್ಮನೂ ಬೇರೆ ಬೇರೆ ಎನ್ನಲೇಬೇಕು —೩೧

ಸಿ— ಸೇತುವೆಗಳು (ಕಟ್ಟೆಗಳು) ಹೊಲದ ಎಲ್ಲೆಯುಕಟ್ಟನ್ನು ಕಾಪಾಡುವಂತೆ ಬ್ರಹ್ಮವು ವರ್ಣಾಶ್ರಮಧರ್ಮಗಳ ಎಲ್ಲೆಕಟ್ಟನ್ನು ಕಾಪಾಡುವದು. ಮುಕ್ತಿಯ ತನಕ ಜೀವಬ್ರಹ್ಮರಿಗೆ ಸುಳ್ಳಾದ ಭೇದವಿದ್ದೇ ಇರುವದನ್ನಿಟ್ಟುಕೊಂಡು ಬ್ರಹ್ಮಕ್ಕೆ ಸೇತುವೆಯೆನ್ನುವ ಮಾತನ್ನು ಹೇಳಬಹುದು. —೩೨

,, ಇನ್ನು ಪರಿಮಾಣದ ವಿಷಯವನ್ನು ತೆಗೆದುಕೊಂಡರೆ ಅದು ಬುದ್ಧಿಯನ್ನು ಲಕ್ಷ್ಯದಲ್ಲಿಟ್ಟುಕೊಂಡು ಆಡಿದ ಮಾತು. ಬ್ರಹ್ಮಾಂಡವೆಲ್ಲ ಬ್ರಹ್ಮದ ಒಂದು ಪಾದವೆಂದೂ ಬ್ರಹ್ಮವು ಅದರ ಮೇಲೆ ಮೂರು ಪಾದದಷ್ಟಿರುವದೆಂದೂ ಹೇಳಿದ ಶ್ರುತಿಯ ಮಾತು ಜೀವಬ್ರಹ್ಮರನ್ನು ಬಿಡಿಸಿ ತಿಳಿಯುವದಕ್ಕೆ ಆಡಿದ್ದಾಗಿರುವಂತೆ ಜೀವಬ್ರಹ್ಮರ ಪರಿಣಾಮದ ಮಾತು ಅವರಿಬ್ಬರನ್ನೂ ಬಿಡಿಸಿ ತಿಳಿಯುವದಕ್ಕೆ ಆಡಿದ್ದಾಗಿರುವದು. ಅಂತಃಕರಣದ ಸಂಬಂಧದಿಂದ ಜೀವನಿಗೆಅಣುತ್ವ ; ಮಾಯೆಯುಸಂಬಂಧದಿಂದ ಈಶ್ವರನಿಗೆ ಮಹತ್ತ್ವ. ಆ ಎರಡು ಸಂಬಂಧಗಳೂ ಸುಳ್ಳಾದದವುಗಳು. ಇಷ್ಟೇ ಹೊರತು ಅಲ್ಲಿ ಶ್ರುತಿಗೆ ಅವರಿಬ್ಬರ ಪರಿಣಾಮವನ್ನು ಗೊತ್ತುಮಾಡುವದು ತಾತ್ಪರ್ಯವಲ್ಲ. —೩೩

,, ಇನ್ನು ಸಂಬಂಧದ ವಿಷಯುವನ್ನು ತೆಗೆದುಕೊಂಡರೆ ಜೀವನು ಗಾಢನಿದ್ರೆಯಲ್ಲಿ ಸೂಕ್ಷ್ಮವಾದ ಅಂತಃಕರಣದಿಂದ ಕೂಡಿರುವದರಿಂದ ಅಲ್ಲಿ ಸಂಬಂಧವೆನ್ನಲಾಗಿರುವದು. ಜೀವನಿಗೆ ಅಂತಃಕರಣದ ಸಂಬಂಧವೂ ಬ್ರಹ್ಮಕ್ಕೆ ಮಾಯೆಯ ಸಂಬಂಧವೂ ಎರಡೂ ಸುಳ್ಳಾದವುಗಳು ಮತ್ತು ಎರಡೂ ಮೋಕ್ಷದ ತನಕ ಇರತಕ್ಕವುಗಳು. ಇನ್ನು ನಾಲ್ಕ

ಸಿ— ಹಿಂದೆ ಹೇಳಿದಂತೆ ಕರ್ಮಗಳಿಗನುಗುಣವಾಗಿ ಈಶ್ವರನೆ ಫಲಗಳನ್ನು ಕೊಡುವನೆಂದು ಬಾದರಾಯಣರ ಅಭಿಪ್ರಾಯ. ಜೀವರು ಮಾಡುವ ಸತ್ಕರ್ಮಗಳನ್ನೂ ದುಷ್ಕರ್ಮಗಳನ್ನೂ ಈಶ್ವರನೇ ಪ್ರೇರಿಸುವನೆಂದಿರುವ ಶ್ರುತಿಯೇ ಅವರ ಪಕ್ಷಕ್ಕೆ ಕಾರಣ. ಹೀಗೆ ಜೀವರ ಸುಕೃತಗಳು ಅಥವಾ ದುಷ್ಕೃತಗಳು ಈಶ್ವರನ ಪ್ರೇರಣೆಯಿಂದ ನಡೆಯುವದರಿಂದ ಈಶ್ವರನೆ ಕರ್ಮಗಳಿಗನುಗುಣವಾಗಿ ಫಲಗಳನ್ನು ಕೊಡುವನು. —೪೧

---

## ಪಾದ ೩

### ಜ್ಞಾನಕ್ಕೆ ಸಾಧನವಾದ ಸಗುಣನಿರ್ಗುಣವಿದ್ಯೆಗಳ ವಿಚಾರ

---

#### ೧ ಒಂದೇ ಜಾತಿಯ ವಿದ್ಯೆಯನ್ನು ಬೇರೆಬೇರೆ ಕಡೆ ಹೇಳಿದ್ದರೂ ಅವೆಲ್ಲ ಒಂದೆ (೧...೪)

**ಪೂ**— ಉಪಾಸನೆ ಒಂದೇ ಜಾತಿಯಾಗಿದ್ದರೂ ಅದನ್ನು ಬೇರೆಬೇರೆ ಹೇಳುವಾಗ ಹೆಸರು, ದ್ರವ್ಯ, ದೇವತೆ—ಮೊದಲಾದ ರೂಪಗಳು ಬೇರೆ ಬೇರೆ ಕಾಣುತ್ತವಲ್ಲ ! ಅವುಗಳನ್ನು ಒಂದೆಂಬುದು ಹೇಗೆ ?

ಸಿ— ಅದೇ ಉಪಾಸನೆಯನ್ನು ಎಲ್ಲೆಲ್ಲಿ ಹೇಳಿದ್ದರೂ ಹೆಸರೂ ರೂಪವೂ ಬದಲಾಗಿರುವದಿಲ್ಲ. ಒಂದು ಕಡೆ ಪಂಚಾಗ್ನಿವಿದ್ಯೆಯೆಂಬ ಹೆಸರಿದ್ದರೆ ಮತ್ತೊಂದು ಕಡೆಯೂ ಅದೇ ಹೆಸರಿದೆ. ಎಲ್ಲ ಕಡೆಯಲ್ಲಿಯೂ ಒಂದೇ ಪ್ರಯೋಜನವು ಹೇಳಲಾಗಿದೆ. ವೈಶ್ವಾನರವಿದ್ಯೆ ಮತ್ತು ಶಾಂಡಿಲ್ಯ ವಿದ್ಯೆ—ಮೊದಲಾದವುಗಳೂ ಇದರಂತೆಯೆ. —೧

**ಪೂ**— ಛಾಂದೋಗ್ಯದಲ್ಲಿ ಐದು ಅಗ್ನಿಗಳ ಉಪಾಸನೆ ಹೇಳಿದೆ. ವಾಜಸನೇಯ ಶಾಖೆಯಲ್ಲಿ ಆರನೆ ಅಗ್ನಿಯನ್ನು ಹೇಳಿದೆ. ಆದ್ದರಿಂದ ಈ ಎರಡು ಉಪಾಸನೆಗಳನ್ನೂ ಬೇರೆ ಬೇರೆ ಎನ್ನಬೇಕಷ್ಟೆ ?

ಸಿ— ಛಾಂದೋಗ್ಯದಲ್ಲಿ ಐದನ್ನು ಹೇಳಿದ ಮಾತ್ರಕ್ಕೆ ಆರನೆಯದು ಬೇಡವೆಂದು ಅರ್ಥವಾಗುವದಿಲ್ಲ. ಆದ್ದರಿಂದ ಅವೆರಡು ವಿದ್ಯೆಯೂ ಒಂದೆ.

ಸಿ — ಹಿಂದೆ ಹೇಳಿದಂತೆ ಕರ್ಮಗಳಿಗನುಗುಣವಾಗಿ ಈಶ್ವರನೆ ಫಲಗಳನ್ನು ಕೊಡುವನೆಂದು ಬಾದರಾಯಣರ ಅಭಿಪ್ರಾಯ. ಜೀವರು ಮಾಡುವ ಸತ್ಕರ್ಮಗಳನ್ನೂ ದುಷ್ಕರ್ಮಗಳನ್ನೂ ಈಶ್ವರನೇ ಪ್ರೇರಿಸುವನೆಂದಿರುವ ಶ್ರುತಿಯೇ ಅವರ ಪಕ್ಷಕ್ಕೆ ಕಾರಣ. ಹೀಗೆ ಜೀವರ ಸುಕೃತಗಳು ಅಥವಾ ದುಷ್ಕೃತಗಳು ಈಶ್ವರನ ಪ್ರೇರಣೆಯಿಂದ ನಡೆಯುವದರಿಂದ ಈಶ್ವರನೆ ಕರ್ಮಗಳಿಗನುಗುಣವಾಗಿ ಫಲಗಳನ್ನು ಕೊಡುವನು. —೪೧

---

## ಪಾದ ೩

### ಜ್ಞಾನಕ್ಕೆ ಸಾಧನವಾದ ಸಗುಣನಿರ್ಗುಣವಿದ್ಯೆಗಳ ವಿಚಾರ

---

೧ ಒಂದೇ ಜಾತಿಯ ವಿದ್ಯೆಯನ್ನು ಬೇರೆಬೇರೆ ಕಡೆ ಹೇಳಿದ್ದರೂ ಅವೆಲ್ಲ ಒಂದೆ (೧..೪)

ಪೂ — ಉಪಾಸನೆ ಒಂದೇ ಜಾತಿಯಾಗಿದ್ದರೂ ಅದನ್ನು ಬೇರೆಬೇರೆ ಹೇಳುವಾಗ ಹೆಸರು, ದ್ರವ್ಯ, ದೇವತೆ–ಮೊದಲಾದ ರೂಪಗಳು ಬೇರೆ ಬೇರೆ ಕಾಣುತ್ತವಲ್ಲ ! ಅವುಗಳನ್ನು ಒಂದೆಂಬುದು ಹೇಗೆ ?

ಸಿ — ಅದೇ ಉಪಾಸನೆಯನ್ನು ಎಲ್ಲೆಲ್ಲಿ ಹೇಳಿದ್ದರೂ ಹೆಸರೂ ರೂಪವೂ ಬದಲಾಗಿರುವದಿಲ್ಲ. ಒಂದು ಕಡೆ ಪಂಚಾಗ್ನಿವಿದ್ಯೆಯೆಂಬ ಹೆಸರಿದ್ದರೆ ಮತ್ತೊಂದು ಕಡೆಯೂ ಅದೇ ಹೆಸರಿದೆ. ಎಲ್ಲ ಕಡೆಯಲ್ಲಿಯೂ ಒಂದೇ ಪ್ರಯೋಜನವು ಹೇಳಲಾಗಿದೆ. ವೈಶ್ವಾನರವಿದ್ಯೆ ಮತ್ತು ಶಾಂಡಿಲ್ಯ ವಿದ್ಯೆ–ಮೊದಲಾದವುಗಳೂ ಇದರಂತೆಯೆ. —೧

ಪೂ — ಛಾಂದೋಗ್ಯದಲ್ಲಿ ಐದು ಅಗ್ನಿಗಳ ಉಪಾಸನೆ ಹೇಳಿದೆ. ವಾಜಸನೇಯ ಶಾಖೆಯಲ್ಲಿ ಆರನೆ ಅಗ್ನಿಯನ್ನು ಹೇಳಿದೆ. ಆದ್ದರಿಂದ ಈ ಎರಡು ಉಪಾಸನೆಗಳನ್ನೂ ಬೇರೆ ಬೇರೆ ಎನ್ನಬೇಕಷ್ಟೆ ?

ಸಿ — ಛಾಂದೋಗ್ಯದಲ್ಲಿ ಐದನ್ನು ಹೇಳಿದ ಮಾತ್ರಕ್ಕೆ ಆರನೆಯದು ಬೇಡವೆಂದು ಅರ್ಥವಾಗುವದಿಲ್ಲ. ಆದ್ದರಿಂದ ಆವೆರಡು ವಿದ್ಯೆಯೂ ಒಂದೆ.

ಆದಕಾರಣ ವಾಜಸನೇಯ ಶಾಖೆಯಲ್ಲಿ ಹೇಳಿರುವ ಆರನೆಯ ಅಗ್ನಿಯನ್ನು ಛಾಂದೋಗ್ಯದ ಉಪಾಸನೆಗೆ ಸೇರಿಸಿಕೊಳ್ಳಬೇಕು. —೨

ಪೂ— ಬ್ರಹ್ಮವಿದ್ಯೆಯನ್ನು ಹೇಳುವದಕ್ಕೆ ಮೊದಲು ತಲೆಯಮೇಲೆ ಬೆಂಕಿಯನ್ನು ಧರಿಸಬೇಕೆಂದು ಅಥರ್ವಣ ಶಾಖೆಯಲ್ಲಿ ಹೇಳಿದೆ. ಬೇರೆ ಶಾಖೆಗಳು ಆ ವ್ರತವನ್ನು ಹೇಳಿಲ್ಲ. ಆದ್ದರಿಂದ ಬೇರೆ ಶಾಖೆಯಲ್ಲಿ ಹೇಳಿದ ಉಪಾಸನೆಯೂ ಅಥರ್ವಶಾಖೆಯಲ್ಲಿ ಹೇಳಿರುವ ಉಪಾಸನೆಯೂ ಹೇಗೆ ಒಂದಾದೀತು ?

ಸಿ— ಅಥರ್ವಶಾಖೆಯಲ್ಲಿ ಆ ವ್ರತವನ್ನು ಹೇಳಿರುವದು ವೇದಾಧ್ಯಯನಕ್ಕೆ ಅಂಗವಾಗಿಯೇ ಹೊರತು ವಿದ್ಯೆಗೆ ಅಥವಾ ಉಪಾಸನೆಗೆ ಅಂಗವಾಗಿ ಅಲ್ಲ. ಸೌರ್ಯಹೋಮವೇ ಮೊದಲಾಗಿ ಶತೌದನವೆಂಬ ಕ್ರತುವೇ ಕೊನೆಯಾಗಿ ಉಳ್ಳ ಏಳು ಹೋಮಗಳಿವೆಯಷ್ಟೆ. ಬೇರೆ ವೇದದಲ್ಲಿ ಹೇಳಿದ ಮೂರು ಅಗ್ನಿಗಳು ಅಲ್ಲಿ ತೋರುವದಿಲ್ಲ. ಅಲ್ಲಿ ತೋರುವದು 'ಏಕರ್ಷಿ' ಎಂಬ ಹೆಸರುಳ್ಳ ಅಗ್ನಿಮಾತ್ರ. ಆದ್ದರಿಂದ ಈ ಏಳು ಹೋಮಗಳು ಆಥರ್ವಣಿಕರಿಗೆ ಮಾತ್ರ ವಿಶೇಷವೆಂದು ನಿರ್ಣಯವಾಯಿತು. ಅವರಂತೆಯೇ ತಲೆಯಮೇಲೆ ಅಗ್ನಿಯನ್ನು ಧರಿಸುವ ವ್ರತವು ವೇದಾಧ್ಯಯನಸಂಬಂಧದಿಂದ ಅವರ ಧರ್ಮವೆಂದೇ ತಿಳಿಯಬೇಕು. ೩

,, 'ಎಲ್ಲ ವೇದಾಂತಗಳೂ ಯಾವದನ್ನು ಹೇಳುವವೊ' ಎಂಬ ಮುಂತಾದ ವೇದ ವಾಕ್ಯಗಳನ್ನು ನೋಡಿದರೂ ಬೇರೆಬೇರೆ ಕಡೆ ಹೇಳಿದ ಮಾತ್ರಕ್ಕೆ ವಿದ್ಯೆ ಬೇರೆ ಬೇರೆ ಆಗುವದಿಲ್ಲವೆಂದು ತಿಳಿಯಬೇಕು. ೪

೨ ಒಂದು ಕಡೆ ಹೇಳಿದ್ದನ್ನು ಇನ್ನೊಂದು ಕಡೆ ಅನುಸಂಧಾನ ಮಾಡಬೇಕು (೫)

ಸಿ— ಬೇರೆ ಬೇರೆ ಕಡೆ ಹೇಳಿದ್ದರೂ ವಿದ್ಯೆ ಒಂದೆಂದು ನಿರ್ಣಯವಾದ ಮೇಲೆ ಒಂದು ಕಡೆ ಹೇಳಿದ ಕೆಲವು ಗುಣಗಳನ್ನು ಮತ್ತೊಂದು ಕಡೆ ಹೇಳದಿದ್ದರೆ ಅಲ್ಲಿ ಆ ಗುಣಗಳನ್ನು ಅನುಸಂಧಾನಮಾಡಿಕೊಳ್ಳಬೇಕು. ಅಗ್ನಿಹೋತ್ರವು ಎಲ್ಲಿ ಹೇಳಿದ್ದರೂ ಒಂದು ಕಡೆ ಹೇಳಿದ ಅದರ ಅಂಗಗಳನ್ನು ಮತ್ತೊಂದು ಕಡೆ ಅನುಸಂಧಾನಮಾಡುವದು ಸರಿಯಷ್ಟೆ. ಉಪಾಸನೆಯಲ್ಲಿಯೂ ಅದರಂತೆಯೇ. —೫

೩ ಛಾಂದೋಗ್ಯದಲ್ಲಿ ಹೇಳಿದ ಉದ್ಗೀಥವಿದ್ಯೆಯು
ವಾಜಸನೇಯದ್ದಕ್ಕಿಂತ ಬೇರೆ (೬...೮)

ಸಿ— ವಾಜಸನೇಯಶಾಖೆಯಲ್ಲಿ ವಾಗಿಂದ್ರಿಯವೆ ಮೊದಲಾದವುಗಳನ್ನು ನಿಂದಿಸಿ ಮುಖ್ಯಪ್ರಾಣನನ್ನು ಹೊಗಳಿ ಅವನು ಉದ್ಗಾನಕರ್ತನೆಂದು ಹೇಳಿದೆ. ಛಾಂದೋಗ್ಯದಲ್ಲಿ ಅದರಂತೆಯೇ ಮೊದಲು ಮಾಡಿ ಮುಖ್ಯ ಪ್ರಾಣವೇ ಉದ್ಗೀಥ (ಸಾಮಗಾನವಿಶೇಷ)ವೆಂದು ಹೇಳಿದೆ. ಒಂದು ಕಡೆ ಉದ್ಗಾನಕರ್ತನೆಂದೂ ಮತ್ತೊಂದು ಕಡೆ ಉದ್ಗೀಥವೆಂದೂ ಬೇರೆ ಬೇರೆ ಕ್ರಮದಲ್ಲಿ ಹೇಳಿರುವದರಿಂದ ಆ ವಿದ್ಯೆಗಳು ಬೇರೆಬೇರೆಯೆ.

**ಪೂ**— ಹಾಗಲ್ಲ. ದೇವಾಸುರರ ಕದನ, ವಾಗಿಂದ್ರಿಯವೇ ಮೊದಲಾದ ವುಗಳ ಸೋಲು, ಮುಖ್ಯಪ್ರಾಣನ ಜಯ–ಇವೇ ಮೊದಲಾದ ಅನೇಕ ಗುಣಗಳು ಸಮಾನವಾಗಿಯೇ ಎರಡು ಶಾಖೆಗಳಲ್ಲಿಯೂ ಹೇಳಿರುವದ ರಿಂದ ವಿದ್ಯೆಯು ಒಂದೇ ಎಂದು ಭಾವಿಸಬೇಕಾಗುವದು. —೬

ಸಿ— ಛಾಂದೋಗ್ಯದಲ್ಲಿ ಓಂಕಾರವನ್ನು ಉಪಾಸನೆಮಾಡಬೇಕೆಂದು ಮೊದಲುಮಾಡಿ ಅದಕ್ಕೆ ರಸತಮವೇ ಮೊದಲಾದ ಗುಣಗಳನ್ನು ಹೇಳಿ ದೇವಾಸುರಯುದ್ಧದಲ್ಲಿ ವಾಕ್ಕು ಮೊದಲಾದವುಗಳಿಗೆ ಸೋಲಾದ ಮೇಲೆ ಮುಖ್ಯಪ್ರಾಣನ ಜಯವನ್ನು ವಿವರಿಸಿ ಮುಖ್ಯಪ್ರಾಣವೇ ಉದ್ಗೀ ಥವೆಂದು ಹೇಳಿದೆ. ವಾಜಸನೇಯಶಾಖೆಯಲ್ಲಾದರೊ ಉದ್ಗಾನ ಮಾಡುವ ಋತ್ವಿಜನೆ ಮುಖ್ಯಪ್ರಾಣನೆಂದು ಹೇಳಿದೆ. ಆದ್ದರಿಂದ ಅವುಗಳಿಗೊಂದಕ್ಕೊಂದಕ್ಕೆ ಸಂಬಂಧವೇ ಇಲ್ಲ. ಪರೋವರೀಯಸ್ತ್ವ, ಸರ್ವಾತ್ಮಕತ್ವ, ಮೊದಲಾದ ಗುಣದಿಂದ ಕೂಡಿದ ಉದ್ಗೀಥೋಪಾಸ ನೆಯು ಹಿರಣ್ಯಶ್ಮಶ್ರುತ್ವ ಮೊದಲಾದ ಗುಣಗಳಿಂದ ಕೂಡಿದ ಉದ್ಗೀ ಥೋಪಾಸನೆಯೂ ಬೇರೆಬೇರೆಯಾದಂತೆ ಮೇಲೆಹೇಳಿದ ಉಪಾಸನೆಗಳೂ ಬೇರೆ ಬೇರೆ. —೭

**ಪೂ**— ಮೇಲೆ ಹೇಳಿದ ಎರಡು ಶಾಖೆಗಳಲ್ಲಿರುವ ವಿದ್ಯೆಗೆ ಉದ್ಗೀಥವಿದ್ಯೆ ಯೆಂಬ ಒಂದೇ ಹೆಸರಿದೆಯಲ್ಲ!

**ಸಿ**— ಬೇರೆ ಬೇರೆ ಬೇರೆ ಜಾತಿಯಾದ ಅಗ್ನಿಹೋತ್ರ, ದರ್ಶ, ಪೂರ್ಣ ಮಾಸ–ಇವುಗಳಿಗೂ ಕಾಠಕವೆಂಬ ಸಂಜ್ಞೆಯುಂಟು. ಹೀಗೆ ಒಂದೇ

ಹೆಸರಿದ್ದ ಮಾತ್ರದಿಂದ ವಿದ್ಯೆಯು ಒಂದಾಗಲಾರದು. —೮

೪ ಉದ್ಗೀಥವಾದ ಓಂಕಾರವೆಂಬಲ್ಲಿ ಉದ್ಗೀಥವೆಂಬ ಮಾತಿಗೆ ಉದ್ಗೀಥದ ಅವಯವವೆಂದರ್ಥ (೯)

**ಪೂ**— ' ಉದ್ಗೀಥವಾದ ಓಂಕಾರವನ್ನು ಉಪಾಸನೆಮಾಡಬೇಕು ' ಎಂದು ಛಾಂದೋಗ್ಯದಲ್ಲಿದೆಯಷ್ಟೆ. ಅದು ಸರಿದೋರುವದಿಲ್ಲ. ಉದ್ಗೀಥವು ಓಂಕಾರವಲ್ಲ. ಉದ್ಗೀಥವನ್ನು ಓಂಕಾರವೆಂದಾಗಲಿ ಓಂಕಾರವನ್ನು ಉದ್ಗೀಥವೆಂದಾಗಲಿ ಉಪಾಸನೆಮಾಡಲೆಂದು ಹಾಗೆ ಹೇಳಿರಬಹುದೆಂದರೆ ಮೇಲೆ ಹೇಳಿದ ಎರಡು ಪದಗಳನ್ನೂ ಕೆಡಿಸಿದಂತಾಗುವದು. 'ನಾವು ತಿಳಿದ ಮೋಟುಮರವು ಪುರುಷ' ಎಂಬ ಮಾತಿನಂತೆ ಬಾಧಜ್ಞಾನವಾದ ಮೇಲೆ ಉದ್ಗೀಥವಾದ ಓಂಕಾರವೆಂದು ಹೇಳಿದೆಯೆಂದು ತಿಳಿಯಬಾರದು. ಹಾಗೆ ಹೇಳುವವರಲ್ಲಿ ಪ್ರಯೋಜನವು ಕಂಡು ಬರುವದಿಲ್ಲ. ಹೀಗಿರುವಾಗ ಉದ್ಗೀಥವಾದ ಓಂಕಾರವೆಂಬ ಮಾತಿಗೇನರ್ಥ ?

**ಸಿ**— ಉದ್ಗೀಥವು ಓಂಕಾರಕ್ಕೆ ವಿಶೇಷಣವೆಂಬ ಅಭಿಪ್ರಾಯದಲ್ಲಿ 'ಉದ್ಗೀಥ'ವೆಂಬ ಮಾತು ಬಂದಿದೆ. ಆ ಮಾತು ಇಲ್ಲದೆ 'ಓಂಕಾರವನ್ನು ಉಪಾಸನೆ ಮಾಡು' ಎಂದಿಷ್ಟೇ ಇದ್ದರೆ ಎಲ್ಲಿ ವೇದಗಳಲ್ಲಿರುವ ಓಂಕಾರವನ್ನು ಪಾಸನೆ ಮಾಡಬೇಕಾದೀತು. ಹಾಗಿಲ್ಲ. 'ಉದ್ಗೀಥವಾದ' ಎಂಬ ಮಾತಿನಿಂದ 'ಉದ್ಗೀಥವೆಂಬ ಸಾಮಭಕ್ತಿಯ ಅವಯವವಾದ' ಎಂಬ ಅರ್ಥವನ್ನು ಒಪ್ಪಿದ್ದರಿಂದ ಉದ್ಗೀಥಾವಯವವಾದ ಓಂಕಾರವನ್ನು ಮಾತ್ರ ಉಪಾಸನೆಮಾಡಬೇಕು. —೯

೫ ಪ್ರಾಣವಿದ್ಯೆಯು ಒಂದಾದ್ದರಿಂದ ಗುಣಗಳನ್ನು ಹೇಳದಿರುವ ಕತೆಯಲ್ಲಿ ಅವನ್ನು ಹೇಳುವ ಕತೆಯಿಂದ ಅನುಸಂಧಾನ ಮಾಡಬೇಕು (೧೦)

**ಪೂ**— ವಾಜಸನೇಯಶಾಖೆಯಲ್ಲಿಯೂ ಛಾಂದೋಗ್ಯದಲ್ಲಿಯೂ ಇಂದ್ರಿಯಗಳು ಜಗಳವಾಡಿದ ಕತೆಯನ್ನು ಹೇಳಿ ಉಸಿರಾಡುವ ಗಾಳಿಯು ವಸಿಷ್ಠತ್ವ ಎಂಬ ಗುಣಉಳ್ಳದ್ದೆಂದು ಹೇಳಿದೆ. ಕೌಷೀತಕೀಶ್ರುತಿಯಲ್ಲಿಯೂ ಇಂದ್ರಿಯಗಳ ಸಂವಾದವು ಹೊರಟಿದೆ. ಆದರೆ ವಸಿಷ್ಠತ್ವ ಎಂಬ ಗುಣವನ್ನು ಹೇಳಿಲ್ಲ. ಇದಲ್ಲದೆ 'ಈ ರೀತಿಯಲ್ಲಿ ಉಪಾಸನೆ

ಮಾಡಿ' ಎಂದು 'ಈರೀತಿಯಲ್ಲಿ' ಎಂಬ ಪದವಿರುವದರಿಂದ ಅಲ್ಲಿ ಎಷ್ಟು ಗುಣಗಳು ಹೇಳಿವೆಯೊ ಅಷ್ಟನ್ನೇ ಉಪಾಸನೆಮಾಡಬೇಕು. ಛಾಂದೋಗ್ಯದಿಂದಾಗಲೀ ವಾಜಸನೇಯದಿಂದಾಗಲೀ ವಸಿಷ್ಠತ್ವ ಎಂಬ ಗುಣವನ್ನು ಇಲ್ಲಿ ಅನುಸಂಧಾನಮಾಡಬಾರದು. ಹೀಗೆಂದು ತೋರುತ್ತದಲ್ಲ !

ಸಿ— ಎಲ್ಲ ಕಡೆಯಲ್ಲಿಯೂ ಪ್ರಾಣೋಪಾಸನೆಯು ಒಂದೇ ಆಗಿರುವದು. ಕೌಶೀತಕಿಶ್ರುತಿಯಲ್ಲಿನ 'ಈರೀತಿಯಾಗಿ' ಎಂಬ ಪದದಿಂದ ಛಾಂದೋಗ್ಯದಲ್ಲಿನ ವಸಿಷ್ಠತ್ವಗುಣವು ಸೇರಿಕೊಳ್ಳಬಾರದೆಂದು ತೋರುವದೇನೋ ನಿಜ. ಆದರೆ ವಾಜಸನೇಯ ಶಾಖೆಯಲ್ಲಿನ 'ಈ ರೀತಿಯಾಗಿ' ಎಂಬ ಪದದಿಂದ ವಸಿಷ್ಠತ್ವವು ಸೇರಿಸಿಕೊಳ್ಳತಕ್ಕದ್ದೆಂದು ತೋರಿಯೇ ತೋರುವದು. ಆದ್ದರಿಂದ ಕೌಷೀತಕಿಯಲ್ಲಿಯೂ ವಸಿಷ್ಠತ್ವಗುಣವನ್ನು ಅನುಸಂಧಾನ ಮಾಡಬೇಕು. —೧೦

೬ ಬ್ರಹ್ಮವನ್ನು ಹೇಳುವ ಕಡೆ ಆನಂದ ಮೊದಲಾದ ಪದಗಳನ್ನು ಕೂಡಿಹಾಕಿಕೊಳ್ಳಬೇಕು (೧೧....೧೩)

ಪೂ— ಬ್ರಹ್ಮವನ್ನು ಹೇಳುವಾಗ ಕೆಲಕೆಲವು ಕಡೆ ಕೆಲಕೆಲವು ಗುಣಗಳ ಮಾತು ಬಂದಿರುತ್ತದೆ. ಎಲ್ಲೆಲ್ಲಿ ಯಾವ ಯಾವ ಗುಣಗಳನ್ನು ಹೇಳಿದೆಯೊ ಅಲ್ಲಲ್ಲಿ ಆಯಾ ಗುಣಗಳನ್ನು ಮಾತ್ರ ತೆಗೆದುಕೊಳ್ಳಬೇಕೆಂದು ತೋರುತ್ತದೆ. ಅಲ್ಲಲ್ಲಿ ಇರುವ ಕೆಲವು ಮಾತುಗಳಿಂದಲೆ ಬ್ರಹ್ಮವನ್ನು ತಿಳಿಯಬಹುದು. ಬೇರೆ ಕಡೆಗಳಿಂದ ಪದಗಳನ್ನೇಕೆ ಕೂಡಿಹಾಕಿಕೊಳ್ಳಬೇಕು ?

ಸಿ— ಬ್ರಹ್ಮವು ಒಂದೇ ಆದ್ದರಿಂದ ಅದನ್ನು ಚೆನ್ನಾಗಿ ತಿಳಿಯುವದಕ್ಕೆ ಸಾಧನವಾಗಿ ಅಲ್ಲಲ್ಲಿ ಹೇಳಿರುವ ಸತ್ಯ, ಜ್ಞಾನ, ಅನಂತ-ಮೊದಲಾದ ಎಲ್ಲ ಪದಗಳನ್ನೂ ಕೂಡಿಸಿಕೊಳ್ಳಬೇಕು. —೧೧

ಪೂ— ಹಾಗಾದರೆ ಮೋದವು ಬಲದ ರೆಕ್ಕೆ, ಪ್ರಮೋದವು ಎಡದ ರೆಕ್ಕೆ–ಎಂದು ಮುಂತಾಗಿ ಹೇಳಿರುವ ಪದಗಳನ್ನು ಬೇರೆ ಕಡೆಯ ಬ್ರಹ್ಮವನ್ನು ತಿಳಿಯುವಾಗ ಕೂಡಿಸಿಕೊಳ್ಳಬೇಕಾಯಿತಲ್ಲ ? —೧೨

ಸಿ— ಹಾಗಲ್ಲ. ಪ್ರಿಯ, ಮೋದ-ಮೊದಲಾದವುಗಳು ಹೆಚ್ಚು ಕಡಿಮೆಯೂ ಆಗತಕ್ಕವುಗಳು. ಬ್ರಹ್ಮವು ಹೆಚ್ಚುಕಡಿಮೆಯಾಗತಕ್ಕದ್ದಲ್ಲ. ಆದ್ದರಿಂದ ಅವುಗಳನ್ನು ಬ್ರಹ್ಮವಾಕ್ಯಗಳಲ್ಲಿ ಕೂಡಿಸಿಕೊಳ್ಳಬಾರದು. ಅವೆಲ್ಲ ಕೋಶಧರ್ಮಗಳು. ಅವು ಪರಮಾತ್ಮನನ್ನು ತಿಳಿಯುವದಕ್ಕೆ ಉಪಾಯ ಮಾತ್ರವಾದವುಗಳು. —೧೨

,, ಪ್ರಿಯ, ಮೋದ-ಮೊದಲಾದವುಗಳನ್ನು ಹೇಳುವ ಪದಗಳನ್ನು ಕೂಡಿಸಿಕೊಳ್ಳದಿದ್ದರೂ ಆನಂದ, ಸತ್ಯ ಮೊದಲಾದ ಪದಗಳನ್ನು ಬ್ರಹ್ಮವಾಕ್ಯದಲ್ಲಿ ಕೂಡಿಸಿಕೊಳ್ಳಲೇ ಬೇಕು. ಏಕೆಂದರೆ ಅವುಗಳೆಲ್ಲ ಬ್ರಹ್ಮವನ್ನು ಸಂಶಯವಿಲ್ಲದಂತೆ ತಿಳಿಸುವವು. —೧೩

೭ ವಿಷಯಗಳು ಹೆಚ್ಚಿನವೆಂದು ಹೇಳಿದ್ದು ಉಪಾಸನೆಗಾಗಿ (೧೪...೧೫)

ಪೂ— ಇಂದ್ರಿಯಗಳಿಗಿಂತ ವಿಷಯಗಳು ಹೆಚ್ಚಿನವು; ವಿಷಯಗಳಿಗಿಂತ ಮನಸ್ಸು ಹೆಚ್ಚಿನದು ಎಂದು ಹೇಳುತ್ತ ಕೊನೆಗೆ 'ಪುರುಷನು ಹೆಚ್ಚಿನವನು' ಎಂಬದಾಗಿ ಕಠೋಪನಿಷತ್ತಿನಲ್ಲಿ ಹೇಳಿದೆಯಷ್ಟೆ. ಹೆಚ್ಚಿನವನಾದ ಪುರುಷನನ್ನು ತಿಳಿಯಬೇಕಾಗಿರುವಂತೆ ಹೆಚ್ಚಿನವುಗಳಾದ ವಿಷಯಗಳೂ ತಿಳಿಯತಕ್ಕವುಗಳೇ ಆಗುವವೆಂದು ತೋರುವದಲ್ಲ!

ಸಿ— ಹೆಚ್ಚಿನವುಗಳಾದ ವಿಷಯಗಳು ಅವಶ್ಯಕವಾಗಿ ತಿಳಿಯತಕ್ಕವುಗಳೆಂಬ ಅಭಿಪ್ರಾಯದಿಂದ ಹಾಗೆ ಹೇಳಿಲ್ಲ. ಎಲ್ಲ ವಸ್ತುಗಳಿಗಿಂತಲೂ ಪುರುಷನು ಹೆಚ್ಚಿನವನೆಂದು ತೋರಿಸುವದಕ್ಕೆ ಮಾತ್ರವೆ ವಿಷಯ ಮೊದಲಾದವುಗಳ ಹೆಚ್ಚುಗಾರಿಕೆಯನ್ನು ಹೇಳುವ ಮಾತುಗಳ ಝರಿಯು ಹೊರಟಿದೆ. ಆದ್ದರಿಂದ ಪುರುಷನ ಹೆಚ್ಚುಗಾರಿಕೆಯು ತಿಳಿಯಬೇಕಾದದ್ದು. ಏಕೆಂದರೆ ಪುರುಷನು ಹೆಚ್ಚಿನವನೆಂದು ತಿಳಿದರೆ ಮೋಕ್ಷವಾಗುವದು. ವಿಷಯ ಮೊದಲಾದವುಗಳು ಹೆಚ್ಚಿನವುಗಳೆಂದು ತಿಳಿಯುವದರಿಂದ ಮೋಕ್ಷವಿಲ್ಲ. —೧೪

,, ಇದೇ ಆತ್ಮನೆ ಎಲ್ಲ ಭೂತಗಳೊಳಗೆ ಗೂಢನಾಗಿದ್ದಾನೆ; ಹೊರಗೆ ಕಾಣಿಸಿಕೊಳ್ಳುವದಿಲ್ಲ' ಎಂಬ ವಾಕ್ಯದಲ್ಲಿ ಇದೇ ಪುರುಷನನ್ನೆ ಆತ್ಮನೆಂಬ ಮಾತಿನಿಂದ ಕರೆದಿರುವದರಿಂದ ವಿಷಯ ಮೊದಲಾದವುಗಳನ್ನು ಅನಾತ್ಮವೆಂದು ಹೇಳಿದಂತಾಯಿತು. ಆದ್ದರಿಂದ ವಿಷಯ ಮೊದಲಾದ

ವುಗಳು ತಿಳಿಯಬೇಕಾದವುಗಳೇನೂ ಅಲ್ಲ. ಆತ್ಮನು ಮಾತ್ರವೆ ತಿಳಿಯ ಬೇಕಾದವನು. —೧೫

೮ ಆತ್ಮನೆಂದರೆ ಪರಮಾತ್ಮನೆಂದೇ ಅರ್ಥ (೧೬ ...೧೭)

**ಪೂ**— ಐತರೇಯಕದಲ್ಲಿ 'ಸೃಷ್ಟಿಗೆ ಮೊದಲು ಆತ್ಮನೊಬ್ಬನೇ ಇದ್ದನು' ಅವನು ಈ ಭೂಮಿಯೇ ಮೊದಲಾದಲೋಕಗಳನ್ನು ಮಾಡಿದನು' ಎಂದಿದೆಯಷ್ಟೆ. ಲೋಕಗಳನ್ನು ಹುಟ್ಟಿಸಿದವನು ಹಿರಣ್ಯಗರ್ಭನೆಂದು ಬೇರೆಕಡೆ ನಿರ್ಣಯವಾಗಿದೆ. ಆದ್ದರಿಂದ ಇಲ್ಲಿ ಆತ್ಮನೆಂದರೆ ಹಿರಣ್ಯಗರ್ಭನೆಂದು ತೋರುವದಲ್ಲ! "ಇಂದ್ರಿಯಾಭಿಮಾನಿದೇವತೆಗಳಿಗೆ ಹಸುವನ್ನು ತೋರಿಸಿದನು; ಕುದುರೆಯನ್ನು ತೋರಿಸಿದನು; ಪುರುಷನನ್ನು ತೋರಿಸಿದನು" ಎಂದು ಹೇಳಿರುವದರಿಂದಲೂ ಲೋಕದಲ್ಲಿ ಹಸು, ಕುದುರೆ–ಮೊದಲಾದ ಭೋಗ್ಯವಸ್ತುಗಳನ್ನಿಟ್ಟುಕೊಂಡಿರುವ ಹಣಗಾರರ ವ್ಯವಹಾರದಂತಿರುವ ಆತ್ಮನ ವ್ಯವಹಾರವು ಆತ್ಮನೆಂಬ ಪದಕ್ಕೆ ಹಿರಣ್ಯಗರ್ಭನೆಂಬ ಅರ್ಥವನ್ನೇ ತೆಗೆದುಕೊಳ್ಳಬೇಕೆಂಬ ಅಭಿಪ್ರಾಯವನ್ನು ದೃಢಪಡಿಸುತ್ತದೆ.

**ಸಿ**— 'ಆತ್ಮನಿಂದ ಆಕಾಶವು ಹುಟ್ಟಿತು' ಎಂದು ಹೇಳಿರುವ ತೈತ್ತಿರೀಯವೇ ಮೊದಲಾದ ಶ್ರುತಿಗಳಂತೆ ಇಲ್ಲಿಯೂ ಲೋಕವನ್ನು ಹುಟ್ಟಿಸಿದವನು ಪರಮಾತ್ಮನೆಂದೆ ಅರಿಯಬೇಕು. —೧೬

**ಪೂ**— ಲೋಕವನ್ನು ಹುಟ್ಟಿಸುವದೂ ಹಣಗಾರರಂತೆ ವ್ಯವಹರಿಸುವದೂ ಹಿರಣ್ಯಗರ್ಭನನ್ನು ಸೂಚಿಸುವದಿಲ್ಲವೆ? —೧೭

**ಸಿ**— 'ಸೃಷ್ಟಿಗೆ ಮೊದಲು ಆತ್ಮನೊಬ್ಬನೇ ಇದ್ದನು' ಎಂಬಲ್ಲಿ ಅವಧಾರಣವಿರುವದರಿಂದ ಆತ್ಮನೆಂಬ ಮಾತಿಗೆ ಪರಮಾತ್ಮನೆ ಅರ್ಥ. ಹಿರಣ್ಯಗರ್ಭನೆಂಬರ್ಥವನ್ನೊಪ್ಪಿದರೆ ಸೃಷ್ಟಿಗೆ ಮೊದಲು ಪರಮಾತ್ಮನೂ ಇರುವದರಿಂದ ಅವನೊಬ್ಬನೇ ಎಂಬ ಮಾತು ಸಲ್ಲುವದಿಲ್ಲ. ಪರಮಾತ್ಮನು ಮಹಾಭೂತಗಳನ್ನು ಹುಟ್ಟಿಸಿ ಆಮೇಲೆ ಲೋಕಗಳನ್ನು ಹುಟ್ಟಿಸಿದನೆಂದರೆ ವಿರೋಧವಾಗಲಾರದು. ಹಣಗಾರರ ವ್ಯವಹಾರದಂತಿರುವ ಮಾತುಗಳೆಲ್ಲ ಬರೀ ಕತೆಯ ಮಾತುಗಳು. ಅವೆಲ್ಲ ಪರಮಾತ್ಮನನ್ನು ತಿಳಿಸುವ ಉಪಾಯ ಮಾತ್ರ. —೧೭

೯ ಸ್ಮೃತಿಯಲ್ಲಿ ಹೇಳಿದ ಆಚಮನವೆ ವೇದದಲ್ಲಿದೆ; ಅದು ಅನುವಾದ (೧೮)

ಪೂ— ಛಾಂದೋಗ್ಯದಲ್ಲಿಯೂ ವಾಜಸನೇಯಶಾಖೆಯಲ್ಲಿಯೂ ಪ್ರಾಣಗಳ ಮಾತುಗಾರಿಕೆಯಲ್ಲಿ ನಾಯಿಗಳು ತಿನ್ನುವವರೆಗಿನ ಆಹಾರವೆಲ್ಲ ಪ್ರಾಣನಿಗೆ ಆಹಾರವೆಂದು ಹೇಳಿದೆ. ಅದರ ಆಮೇಲೆ ಛಾಂದೋಗ್ಯದಲ್ಲಿ 'ಆದ್ದರಿಂದ ಊಟಮಾಡುವವರು ಆಹಾರದ ಕೆಳಗೂ ಮೇಲೂ ನೀರನ್ನು ಉಪಯೋಗಿಸಿ ಪ್ರಾಣನಿಗೆ ಬಟ್ಟೆಯುಡಿಸುತ್ತಾರೆ' ಎಂದು ಹೇಳಿದೆ. ವಾಜಸನೇಯಶಾಖೆಯಲ್ಲಾದರೊ "ಆದ್ದರಿಂದ ಉಪಾಸಕರು ಊಟಮಾಡುವದಕ್ಕೆ ಮೊದಲೂ ಆಮೇಲೆಯೂ ಆಚಮನ ಮಾಡುತ್ತಾರೆ; ಅದರಿಂದ ಪ್ರಾಣವನ್ನು ಬೆತ್ತಲೆಯಾಗದಂತೆ ಚಿಂತಿಸುತ್ತಾರೆ. ಆದ್ದರಿಂದ ಹೀಗೆ ತಿಳಿದವನು ಊಟಕ್ಕೆ ಮೊದಲೂ ಆಮೇಲೆಯೂ ಆಚಮನಮಾಡಬೇಕು. ಅದರಿಂದ ಅವನು ಪ್ರಾಣವನ್ನು ಬೆತ್ತಲೆಯಾಗದಂತೆ ಮಾಡುತ್ತಾನೆ." ಎಂದು ಹೇಳಿದೆ. ಈ ವಾಕ್ಯಗಳನ್ನು ನೋಡಿದರೆ ಆಚಮನದಲ್ಲಿಯೂ ಬೆತ್ತಲೆಯಾಗದಿರುವ ಪ್ರಾಣನ ಉಪಾಸನೆಯಲ್ಲಿಯೂ ತಾತ್ಪರ್ಯವಿರುವಂತೆ ಕಾಣುತ್ತದೆ. ಅಥವಾ ಆಚಮನವನ್ನು ಮಾಡಬೇಕೆಂಬುದಾಗಿ ಸ್ಪಷ್ಟವಾಗಿ ವಿಧಿವಿಭಕ್ತಿ ಇರುವದರಿಂದ ಆಚಮನ ಮಾತ್ರದಲ್ಲಿಯೇ ಈ ವಾಕ್ಯಕ್ಕೆ ತಾತ್ಪರ್ಯವೆಂದು ಕಾಣುತ್ತದಲ್ಲ!

ಸಿ— ಆಚಮನದಲ್ಲಿಯೂ ಬೆತ್ತಲೆಯಾಗದಿರುವ ಪ್ರಾಣನ ಉಪಾಸನೆಯಲ್ಲಿಯೂ ವಾಕ್ಯಕ್ಕೆ ತಾತ್ಪರ್ಯವಿದ್ದರೆ ವಾಕ್ಯವು ಎರಡಾಗಬೇಕಾದೀತು. ಆಚಮನವು ಸ್ಮೃತಿಗಳಲ್ಲಿ ಬಂದಿದೆ. ಅದನ್ನು ವೇದಭಾಗವು ಅನುವಾದಮಾಡುವದೆಂದರೂ ಹೊಂದುವದು. ಆದ್ದರಿಂದ ಎಲ್ಲಿಯೂ ಹೇಳದೆ ಇರುವ ಪ್ರಾಣನ ಬೆತ್ತಲೆಯಾಗದಿರುವದೆಂಬ ಉಪಾಸನೆಯಲ್ಲಿಯೇ ಈ ವಾಕ್ಯಕ್ಕೆ ತಾತ್ಪರ್ಯ. ಆದ್ದರಿಂದ ಪ್ರಾಣೋಪಾಸಕನು ನೀರನ್ನು ಬಟ್ಟೆಯೆಂದು ಧ್ಯಾನಿಸಬೇಕು. —೧೮

೧೦ ಒಂದೇ ಶಾಖೆಯಲ್ಲಿ ಮತ್ತೊಮ್ಮೆ ಹೇಳಿದ್ದರೂ ವಿದ್ಯೆಯು ಒಂದೆ (೧೯)

ಪೂ— ವಾಜಸನೇಯಶಾಖೆಯಲ್ಲಿ ಅಗ್ನಿರಹಸ್ಯವೆಂಬ ಭಾಗದಲ್ಲಿ ಶಾಂಡಿಲ್ಯವಿದ್ಯೆಯು ಹೇಳಲಾಗಿದೆ. ಅದೇ ಶಾಖೆಯಲ್ಲಿನ ಉಪನಿಷತ್ತಿನಲ್ಲಿ

ಮತ್ತೊಮ್ಮೆ ಶಾಂಡಿಲ್ಯವಿದ್ಯೆಯು ಹೇಳಲಾಗಿವೆ ಮತ್ತು ಆಗ ಹಿಂದೆ ಹೇಳದಿರುವ ಕೆಲವು ಗುಣಗಳೂ ಹೇಳಲಾಗಿವೆ. ಬೇರೆ ಬೇರೆ ಶಾಖೆಯಲ್ಲಿ ಹೇಳಿದ್ದರೆ ಅದನ್ನು ಓದುವವರು ಬೇರೆಬೇರೆಯಾದ್ದರಿಂದ ವಿದ್ಯೆಯು ಒಂದೇ ಎಂದರೂ ಸಲ್ಲಬಹುದು. ಒಂದೇ ಶಾಖೆಯಲ್ಲಿಯೇ ಬೇರೆ ಪ್ರಕರಣದಲ್ಲಿ ಹೇಳಿದುದನ್ನೇ ಮತ್ತೊಮ್ಮೆ ಹೇಳುವದು ವ್ಯರ್ಥವಾಗುವದು. ಆದ್ದರಿಂದ ವಿದ್ಯೆಯು ಬೇರೆ ಬೇರೆಯೆಂದು ತೋರುತ್ತದೆ.

ಸಿ— ಬೇರೆ ಬೇರೆ ಶಾಖೆಯಲ್ಲಿದ್ದರೂ ವಿದ್ಯೆಯು ಒಂದೆಂಬಂತೆ ಒಂದೇ ಶಾಖೆಯಲ್ಲಿ ಮತ್ತೊಮ್ಮೆ ಹೇಳಿದ್ದರೂ ಒಂದೆಂದೇ ಒಪ್ಪಬೇಕು. ಉಪಾಸ್ಯವಾದ ಬ್ರಹ್ಮವು ಎರಡು ಕಡೆಗಳಲ್ಲಿಯೂ ಸಮವಾಗಿ ಕಾಣುತ್ತಿದೆ. ದ್ರವ್ಯ ಮತ್ತು ದೇವತೆ—ಇವೇ ವಿದ್ಯೆಯ ರೂಪ. ಹೀಗೆ ತಿಳಿಯತಕ್ಕದ್ದು ಒಂದಾಗಿರುವಾಗ ವಿದ್ಯೆಯು ಮಾತ್ರ ಹೇಗೆ ಬೇರೆಯಾದೀತು ? ಹೇಳಿದ್ದನ್ನೆ ಮತ್ತೆ ಹೇಳಿದ ದೋಷವು ಇಲ್ಲಿ ಬರುವದಿಲ್ಲ. ಒಂದು ವಾಕ್ಯವು ವಿದ್ಯೆಯನ್ನು ವಿಧಾನಮಾಡುವದಾಗಿಯೂ ಇನ್ನೊಂದು ಗುಣವನ್ನು ವಿಧಾನಮಾಡುವದಾಗಿಯೂ ಹೇಳುವದರಿಂದ ದೋಷವೇನೂ ಇಲ್ಲ. —೧೯

೧೧ ಅಹಃ ಎಂಬ ಹೆಸರನ್ನು ಬಲಗಣ್ಣಿನಲ್ಲಿರುವ ಪುರುಷನಲ್ಲಿಯೂ ಅಹಂ ಎಂಬ ಹೆಸರನ್ನು ಆದಿತ್ಯಮಂಡಲದಲ್ಲಿರುವ ಪುರುಷನಲ್ಲಿಯೂ ಚಿಂತಿಸಬಾರದು (೨೦ ...೨೨)

ಪೂ— ಬೃಹದಾರಣ್ಯಕದಲ್ಲಿ ಆದಿತ್ಯಮಂಡಲದಲ್ಲಿರುವ ಪುರುಷನ (ಆಧಿದೈವಿಕ) ಉಪಾಸನೆಯನ್ನೂ ಬಲಗಣ್ಣಿನಲ್ಲಿರುವ ಪುರುಷನ(ಆಧ್ಯಾತ್ಮಿಕ) ಉಪಾಸನೆಯನ್ನೂ ಹೇಳಿದೆಯಷ್ಟೆ. ಅಲ್ಲಿ ಆದಿತ್ಯಪುರುಷನಿಗೆ 'ಅಹಃ' ಎಂಬ ಹೆಸರನ್ನೂ ಕಣ್ಣಿನಲ್ಲಿರುವ ಪುರುಷನಿಗೆ 'ಅಹಂ' ಎಂಬ ಹೆಸರನ್ನೂ ವೇದವು ಹೇಳಿದೆ. ಎರಡು ಕಡೆಯಲ್ಲಿಯೂ ಉಪಾಸ್ಯನು ಹಿರಣ್ಯಗರ್ಭನೆ. ಆದ್ದರಿಂದ ಎರಡು ಹೆಸರುಗಳನ್ನೂ ಎರಡು ಕಡೆಯಲ್ಲಿಯೂ ಚಿಂತಿಸಬಹುದೆಂದು ತೋರುತ್ತದೆಯಲ್ಲ! —೨೦

ಸಿ— ಆದಿತ್ಯಮಂಡಲದ ಸ್ಥಾನವನ್ನು ಗುರಿಯಲ್ಲಿಟ್ಟುಕೊಂಡು 'ಅಹಃ' ಎಂಬ ಹೆಸರನ್ನೂ ಕಣ್ಣೆಂಬ ಸ್ಥಾನವನ್ನು ಗುರಿಯಲ್ಲಿಟ್ಟುಕೊಂಡು

'ಅಹಂ' ಎಂಬ ಹೆಸರನ್ನೂ ಹೇಳಿರುವದರಿಂದ ಅಲ್ಲಿ ಹೇಳಿರುವಂತೆಯೇ ಒಂದೊಂದೇ ಹೆಸರನ್ನು ಆಯಾ ಉಪಾಸನೆಯನ್ನು ಮಾಡುವಾಗ ಚಿಂತಿಸಬೇಕು. —೨೧

,, ಅಧಿದೈವಿಕ ಮತ್ತು ಆಧ್ಯಾತ್ಮಿಕ ಉಪಾಸನೆಗಳಲ್ಲಿ ಒಂದರ ಧರ್ಮವನ್ನು ಮತ್ತೊಂದು ಕಡೆ ಚಿಂತಿಸಬಾರದೆಂಬ ಅಭಿಪ್ರಾಯದಿಂದಲೇ 'ಯಾವದು ಇವಕ್ಕೆ ಕಾಲುಗಳೋ ಅದೇ ಅಕ್ಷಿಪುರುಷನಿಗೂ ಕಾಲುಗಳು' ಎಂದು ಹೇಳಿದೆ. ಹಾಗಿಲ್ಲದಿದ್ದರೆ ಈ ವಾಕ್ಯವಿಲ್ಲದಿದ್ದರೂ ಪರಸ್ಪರ ಧರ್ಮಗಳನ್ನು ಚಿಂತಿಸಬಹುದಾದಾಗ ಈ ವಾಕ್ಯವು ವ್ಯರ್ಥವೆನಿಸೀತು. —೨೨

೧೨ ತುಂಬಿರುವಿಕೆ, ವ್ಯಾಪಕತ್ವ—ಮೊದಲಾದವುಗಳನ್ನು ಶಾಂಡಿಲ್ಯ ಮೊದಲಾದ ವಿದ್ಯೆಗಳಲ್ಲಿ ಚಿಂತಿಸಬಾರದು (೨೩)

ಪೂ— ರಾಣಾಯನೀಯಖಿಲದಲ್ಲಿ ತುಂಬಿರುವಿಕೆ ಮೊದಲಾದವುಗಳನ್ನು ಬ್ರಹ್ಮದ ಧರ್ಮವಾಗಿ ಹೇಳಿದೆ. ಅದೇ ಶಾಖೆಯ ಉಪನಿಷತ್ತಿನಲ್ಲಿ ಶಾಂಡಿಲ್ಯ ಮೊದಲಾದ ವಿದ್ಯೆಗಳು ಹೊರಟಿವೆ. ಶ್ರೇಯಸ್ಕರ ವಸ್ತು ಒಂದೆ ಆಗಿರುವದರಿಂದ ತುಂಬಿರುವಿಕೆ ಮೊದಲಾದ ಗುಣಗಳನ್ನು ಶಾಂಡಿಲ್ಯ ಮೊದಲಾದ ವಿದ್ಯೆಗಳಲ್ಲಿಯೂ ಕೂಡಿಸಿಕೊಳ್ಳಬೇಕೆಂದು ತೋರುತ್ತದೆಯಲ್ಲ!

ಸಿ— ಇಲ್ಲಿಯೂ ಶಾಂಡಿಲ್ಯ ಮೊದಲಾದ ವಿದ್ಯೆಗಳಲ್ಲಿ ಪರಮಾತ್ಮನಿಗೆ ಹೃದಯವೇ ಮೊದಲಾದ ಸ್ಥಾನಗಳು ಹೇಳಿವೆ. ತುಂಬಿರುವಿಕೆ ಮೊದಲಾದವುಗಳು ಆಧಿದೈವಿಕವಿಭೂತಿಗಳು. ಅವುಗಳಿಗೆ ಆಧ್ಯಾತ್ಮಿಕೋಪಾಸನೆಯಲ್ಲಿ ಸ್ಥಲವಿಲ್ಲ.

೧೩ ತೈತ್ತಿರೀಯಕದಲ್ಲಿರುವ ಪುರುಷವಿದ್ಯೆಯು ಛಾಂದೋಗ್ಯ ಪುರುಷವಿದ್ಯೆಗಿಂತ ಬೇರೆ (೨೪)

ಪೂ— ತಾಂಡಿರಹಸ್ಯಬ್ರಾಹ್ಮಣದಲ್ಲಿ 'ಪುರುಷನೇ ಯಜ್ಞ' ಮೊದಲಾದ ಮಾತುಗಳಿವೆ. ತೈತ್ತಿರೀಯಕದಲ್ಲಿಯೂ ಒಂದು ಪುರುಷಯಜ್ಞದ ಮಾತು ಬಂದಿದೆ. ಅವೆರಡೂ ಒಂದೇಯಷ್ಟೆ?

ಸಿ— ಹಾಗಲ್ಲ. ತೈತ್ತಿರೀಯಕದಲ್ಲಿ ಪುರುಷನ ಯಜ್ಞವೆಂಬದಾಗಿ ಹೇಳಿರುವದರಿಂದ ಯಜ್ಞವು ಪುರುಷನಿಗಿಂತ ಬೇರೆಯೆಂದು ತೋರುತ್ತದೆ.

ತಾಂಡಿರಹಸ್ಯದಲ್ಲಿ ಪುರುಷನೆ ಯಜ್ಞವೆಂದು ಹೇಳಿದೆ. ಇಷ್ಟೇ ಅಲ್ಲ; ತೈತ್ತಿರಿಯಕದಲ್ಲಿ ಆತ್ಮನೆ ಯಜಮಾನ, ಶ್ರದ್ಧೆಯೇ ಪತ್ನಿ–ಮುಂತಾಗಿ ಬಹಳ ವ್ಯತ್ಯಸ್ತವಾಗಿ ಹೇಳಿದೆ. ತಾಂಡಿಬ್ರಾಹ್ಮಣದಲ್ಲಿ ಹಾಗಿಲ್ಲ. ಎರಡು ಶ್ರುತಿಗಳಲ್ಲಿಯೂ ಇರುವ ಸವನಕಲ್ಪನೆಯೂ ಬೇರೆಬೇರೆಯಾಗಿವೆ. ಆದ್ದರಿಂದ ಆ ವಿದ್ಯೆಗಳು ಬೇರೆ ಬೇರೆ. —೨೪

೧೪ ಉಪನಿಷತ್ತುಗಳ ಮೊದಲಲ್ಲಿರುವ ಮಂತ್ರಗಳು ಉಪನಿಷತ್ತಿನಲ್ಲಿ ಹೇಳುವ ವಿದ್ಯೆಗೆ ಅಂಗವಲ್ಲ (೨೫)

**ಪೂ**— ಉಪನಿಷತ್ತನ್ನು ಮೊದಲು ಮಾಡುವ ಮುಂಚೆ 'ಹೃದಯವನ್ನು ಸೀಳು' ಎಂದು ಮುಂತಾಗಿ ಹೇಳುವ ಮಂತ್ರಗಳಿವೆಯಷ್ಟೆ. ಅವು ಮುಂದೆ ಉಪನಿಷತ್ತಿನಲ್ಲಿ ಹೇಳುವ ವಿದ್ಯೆಗಳಿಗೆ ಅಂಗವಾಗಿ ತೋರುವವಿಲ್ಲವೆ ?

**ಸಿ**— ಇಲ್ಲ. 'ಹೃದಯವನ್ನು ಸೀಳು' ಎಂದು ಮುಂತಾಗಿ ಹೇಳುವ ಮಂತ್ರಗಳು ಇತರರಿಗೆ ಹಿಂಸೆಯನ್ನು ಮಾಡುವ ಮಾಟ (ಆಭಿಚಾರಿಕ)ದ ಕ್ರಿಯೆಗಳಿಗೆ ಅಂಗವಾದೀತೇ ಹೊರತು ಸೌಮ್ಯವಾದ ಬ್ರಹ್ಮೋಪಾಸನೆಯಲ್ಲಿ ಅಂಗಗಳಾಗಲಾರವು. ವಿದ್ಯೆಯ ಹತ್ತಿರದಲ್ಲಿ ಹೇಳಿರುವ ಮಾತ್ರದಿಂದ ಅವು ವಿದ್ಯೆಗೆ ಅಂಗವಾಗಲಾರವು. ಅವುಗಳ ಅರ್ಥವನ್ನು ವಿಚಾರ ಮಾಡಿದರೆ ಅವು ಮಾಟ ಮೊದಲಾದವುಗಳಿಗೆ ಅಂಗಗಳೆಂದು ತೋರುವವು. ಹತ್ತಿರದಲ್ಲಿ ಹೇಳಿರುವ ಮಾತೆಂಬುದಕ್ಕಿಂತ ಶಬ್ದಶಕ್ತಿಯಿಂದ ತೋರುವ ಅರ್ಥವು ಹೆಚ್ಚಿನದೆಂದು ಪೂರ್ವಮೀಮಾಂಸಕರೂ ಹೇಳುವರು. ಅರಣ್ಯದಲ್ಲಿ ಹೇಳಬೇಕೆಂಬ ಅಂಶವನ್ನು ಮನಸ್ಸಿನಲ್ಲಿಟ್ಟುಕೊಂಡು ಉಪನಿಷತ್ತಿನ ಹತ್ತಿರದಲ್ಲಿ ಆ ಮಂತ್ರಗಳು ಬಂದಿವೆ. —೨೫

೧೫ ಪಾಪವನ್ನು ಬಿಡುವನೆಂದು ಮಾತ್ರ ಇರುವ ಕಡೆ ವಿದ್ವಾಂಸನ ಹಗೆಗಳು ಅದನ್ನು ಸ್ವೀಕರಿಸುವರೆಂದು ತಿಳಿಯಬೇಕು (೨೬)

**ಪೂ**— ಕೆಲವು ಕಡೆ 'ವಿದ್ವಾಂಸನು ಪಾಪವನ್ನು ಬಿಡುತ್ತಾನೆ' ಎಂದು ಮಾತ್ರ ಹೇಳಿದೆ. ಇನ್ನೊಂದೆಡೆಯಲ್ಲಿ 'ವಿದ್ವಾಂಸನ ಪಾಪಗಳನ್ನು ಅವನ ಹಗೆಗಳೂ ಪುಣ್ಯವನ್ನು ಗೆಳೆಯರೂ ತೆಗೆದುಕೊಳ್ಳುವರು' ಎಂದು

ಮಾತ್ರ ಹೇಳಿದೆ. ಪಾಪವನ್ನು ಬಿಡುತ್ತಾನೆಂಬ ವಿಷಯವು ಅಲ್ಲಿಲ್ಲ. ಇನ್ನು ಕೆಲವು ಕಡೆ 'ವಿದ್ವಾಂಸನು ಪಾಪಪುಣ್ಯಗಳನ್ನು ಬಿಡುತ್ತಾನೆ; ಅವನ ಹಗೆಗಳು ಪಾಪವನ್ನೂ ಗೆಳೆಯರು ಪುಣ್ಯವನ್ನೂ ತೆಗೆದುಕೊಳ್ಳುತ್ತಾರೆ' ಎಂದು ಪಾಪದ ಬಿಡುವಿಕೆಯನ್ನೂ ಇತರರು ಅದನ್ನು ತೆಗೆದುಕೊಳ್ಳುವದನ್ನೂ ಎರಡನ್ನೂ ಹೇಳಿದೆ. ಹೀಗೆ ಎರಡೂ ಹೇಳಿರುವ ಕಡೆ ವಿಚಾರವೇ ಇಲ್ಲ. ಹಗೆಗಳು ಪಾಪವನ್ನು ತೆಗೆದುಕೊಳ್ಳುತ್ತಾರೆಂದು ಮಾತ್ರವೇ ಹೇಳಿರುವ ಕಡೆಯೂ ವಿದ್ವಾಂಸನು ತನ್ನ ಪಾಪವನ್ನು ಬಿಟ್ಟ ಹೊರತು ಇತರರು ಅದನ್ನು ತೆಗೆದುಕೊಳ್ಳುವದಾಗುವದಿಲ್ಲವಾದ್ದರಿಂದ ಪಾಪದ ಬಿಡುವಿಕೆಯೂ ತೋರಿಯೇ ತೋರುವದು. ಪಾಪದ ಬಿಡುವಿಕೆಯನ್ನು ಮಾತ್ರ ಹೇಳಿರುವ ಕಡೆ ಅಲ್ಲಿ ಇತರರು ಅದನ್ನು ತೆಗೆದುಕೊಳ್ಳುವರೆಂದು ಇಟ್ಟುಕೊಳ್ಳಬೇಕೊ ಬೇಡವೊ? ಎಂದು ಸಂದೇಹವು ತಲೆದೋರುವದು.

ಸಿ— ಅಲ್ಲಿಯೂ ಆ ಅಂಶವನ್ನು ಇಟ್ಟುಕೊಳ್ಳಲೇಬೇಕು. ಹಾಗೆ ಎರಡು ವಿಷಯವನ್ನೂ ಹೇಳುವದರಿಂದ ವಿದ್ಯೆಯನ್ನು ಚೆನ್ನಾಗಿ ಸ್ತುತಿಮಾಡಿದಂತಾಗುವದು. ವನಸ್ಪತಿಗಳಿಂದಾದ ಕುಶವೆಂದು ಒಂದುಕಡೆ ಹೇಳಿದ್ದರೂ ಉದುಂಬರ ವೃಕ್ಷದ ಕುಶಗಳೆಂದು ಮತ್ತೊಂದು ಕಡೆ ಹೇಳಿರುವದರಿಂದ ವನಸ್ಪತಿಯೆಂಬ ಪದದಿಂದ ಉದುಂಬರವೃಕ್ಷವನ್ನು ತೆಗೆದುಕೊಳ್ಳಬೇಕು. ಛಂದಸ್ಸುಗಳಿಂದ ಸ್ತುತಿಮಾಡುತ್ತಾನೆಂದು ಸಾಮಾನ್ಯವಾಗಿ ಹೇಳಿದ್ದರೂ ದೇವಛಂದಸ್ಸನ್ನು ಮೊದಲು ಹೇಳಬೇಕೆಂಬ ವಿಶೇಷ ವಚನದಂತೆ ಕ್ರಮವು ನಿರ್ಣಯವಾಗುವದು. ಅತಿರಾತ್ರವೆಂಬ ಕ್ರತುವಿನಲ್ಲಿ ಷೋಡಶಿಯೆಂಬ ಗ್ರಹಕ್ಕೆ ಅಂಗಭೂತವಾದ ಸ್ತೋತ್ರದ ಕಾಲವು 'ಸೂರ್ಯನು ಉದಿಸುವ ಕಾಲದಲ್ಲಿ ಸ್ತೋತ್ರ ಮಾಡಬೇಕು' ಎಂಬ ಋಗ್ವೇದದ ವಾಕ್ಯದಿಂದ ನಿರ್ಣಯಿಸಲಾಗುವದು. ಋತ್ವಿಜರು ಗಾನಮಾಡುತ್ತಾರೆಂದು ಸಾಮಾನ್ಯವಾಗಿ ಹೇಳಿದ್ದರೂ ಅಧ್ವರ್ಯುವು ಗಾನಮಾಡುವದಿಲ್ಲವೆಂಬ ವಿಶೇಷವಚನದಿಂದ ನಿರ್ಣಯವಾಗುತ್ತದೆ. ಹಾಗೆಯೇ ಪಾಪಗಳ ಬಿಡುವಿಕೆಯನ್ನು ಮಾತ್ರವೇ ಹೇಳಿದ್ದರೂ ಮತ್ತೊಂದು ವೇದವಾಕ್ಯವನ್ನು ಅನುಸರಿಸಿ ವಿದ್ಯೆಯನ್ನು

ಯಿಟ್ಟು ..........ಈ ಕೊಳಕು ಭಿಕಾರಿಯುಮೇಲೆ ಕನಿಕರಗೊಂಡು - ಇಲ್ಲಿಗೆ ಬಂದಿರಾ? ಇದೇನು? ನನ್ನ ಮನಸ್ಸಿನ ವಿಕಲ್ಪವೇ? ನಾನೇ ನಾದರೂ ಕನಸು ಕಾಣುತ್ತಿರುವೆನೇ? ಈಗ ನಾನೆಲ್ಲಿರುವೆನು?

ಜ:—ಮುಕುಂದ್! ಮುಕುಂದ್! ಈ ಶೋಕವನ್ನು ಬಿಡಿ.

ಮು:—ತಾವು ಇಲ್ಲಿಗೆ ದಯಮಾಡಿಸಿದ ಕಾರ್ಯ?

ಜ:—ಈ ಸಾಧುವರ್ಯರ ಆಜ್ಞೆಯನ್ನು ಪರಿಪಾಲಿಸುವುದಕ್ಕಾಗಿ!

ಮು:—ಸಾಧುವರ್ಯರೇ! ನನ್ನ ಬುದ್ಧಿಯು ಭ್ರಮಿಸಿರುವುದು. ನನ ಗೊಂದೂ ತಿಳಿಯಲಿಲ್ಲ. ತಾವಾದರೂ ಅಪೂರ್ವ ಜ್ಞಾನಿಗಳು. ಎರಡಾವರ್ತಿ ಕ್ರೂರವಾದ ಆತ್ಮಹತ್ಯೆ - ಮತ್ತು ನೀಚ ಕೊಲೆಗನುವಾದ ನನ್ನ ಹಸ್ತಗಳನ್ನು ತಡೆದಿರಿ. ಈ ಸಮಸ್ಯೆಯನ್ನು ಬಿಚ್ಚಿಹೇಳಿ. ಈ ನನ್ನ ಹಿತೈಷಿಗಳು - ಪರಿಪೋಷಕರು - ಇವರು - ಈ ಸಮಯದಲ್ಲಿ - ಇಲ್ಲಿಗೆ ಬಂದುದು ಹೇಗೆ? ಏತಕ್ಕೆ?........ಅಲ್ಲದೆ........ನನ್ನ ಸಂರಕ್ಷಣೆಯಲ್ಲಿ ಇಷ್ಟೊಂದು ತವಕಗೊಳ್ಳುತ್ತಿರುವ ತಾವು ಯಾರು?

ಸಾ:—(ಜಗಜೀವನ್‌ದಾಸ್‌ರವರನ್ನು ತೋರಿಸಿ) ಇವರೇ ಹೇಳುವರು.

ಜ:—ಮುಕುಂದ್! ನೀವು ನಿರಪರಾಧಿ!

ಮು:—ಹಾಂ! ಏನೆಂದಿರಿ? ನಾನು ನಿರಪರಾಧಿ! ಅಹುದೇ?

ಜ:—ಅಹುದು. ನಿರಪರಾಧಿ!

ಮು:—ನಾನು ನಂಬಲಾರೆ. ಇದಿಷ್ಟು ಜನರ ಕೊಲೆಗೆ ಉದ್ಯುಕ್ತನಾದ ನಾನು ನಿರಪರಾಧಿಯೇ?

ಜ:—ಆ ವ್ಯಥೆಯನ್ನು ಬಿಡಿ. ನಿಮ್ಮನ್ನು ನಿರುದ್ಯೋಗಿಗಳನ್ನಾಗಿ ಮಾಡಿ, ಭೀಷಣವಾದ ಬಡತನಕ್ಕೆ ಒಳಪಡಿಸಿ – ಈ ಅನರ್ಥಪರಂಪರೆಗಳಿಗೆ ಅಡಿಗಡಿಗೆ ಗುರಿಮಾಡಿದ ಪಾಪಿ ನಾನು. ಮುಕುಂದ್! ಅದಕ್ಕಾಗಿ ನನ್ನನ್ನು ಮನ್ನಿಸುವಿರಾ?

(ಪ್ರವೇಶ: ಪಾಂಡುರಂಗ)

ಮು:—ನಾನು! ತಮ್ಮನ್ನು ಮನ್ನಿಸುವುದೇ? ಹಾಂ! ಇದೇನು ವಿಚಿತ್ರ!

ಸಿ— ಹೀಗೆ ಹೇಳುವದು ಯುಕ್ತಿಗೂ ಒಪ್ಪುತ್ತದೆ. ಸಗುಣವಾದ ಪರ್ಯಂಕ ಮೊದಲಾದ ವಿದ್ಯೆಗಳಲ್ಲಿ ಮಂಚವನ್ನು ಹತ್ತುವದು, ಹಿರಣ್ಯಗರ್ಭನೊಡನೆ ಮಾತನಾಡುವದು—ಮುಂತಾದ ವ್ಯವಹಾರವನ್ನು ಹೇಳಿರುವದರಿಂದ ಒಂದು ದಾರಿಯಿಂದ ಹೋಗಿ ಹಿರಣ್ಯಗರ್ಭನನ್ನು ಸೇರುವದು ಸಮಂಜಸವಾಗುವದು. ನಿರ್ಗುಣಬ್ರಹ್ಮವಿದ್ಯೆಯಲ್ಲಿ ದಾರಿಯನ್ನು ನಡೆದು ಹೊಂದಬೇಕಾದ ಫಲವು ಇಲ್ಲದಿರುವದರಿಂದ ಆ ಸಂದರ್ಭಗಳಿಗೆ ದೇವಯಾನಮಾರ್ಗವನ್ನು ಕೂಡಿಸಿಕೊಳ್ಳಬಾರದು. ಲೋಕದಲ್ಲಿಯೂ ಹೀಗೆ ವ್ಯವಸ್ಥೆಯುಂಟು. ಒಂದು ಊರನ್ನು ಪಡೆಯಬೇಕಾದರೆ ಅಲ್ಲಿಗೆ ಕರೆದುಕೊಂಡು ಹೋಗಿ ಸೇರಿಸುವ ದಾರಿಯು ಬೇಕು. ಆರೋಗ್ಯವನ್ನು ಪಡೆಯುವದಕ್ಕೆ ಮಾತ್ರ ಮೇಲೆ ಹೇಳಿದ ದಾರಿಯು ಬೇಕಾಗಿಲ್ಲ. —೩೦

೧೮ ಸಗುಣವಿದ್ಯೆಗಳಲ್ಲಿ ಮಾತ್ರ, ಎಲ್ಲ ಕಡೆಯೂ ದೇವಯಾನ ಮಾರ್ಗವನ್ನು ಒಪ್ಪಬೇಕು (೩೧)

ಪೂ— ನಿರ್ಗುಣವಿದ್ಯೆಯ ಮಾತು ಹಾಗಿರಲಿ. ಸಗುಣವಿದ್ಯೆಯನ್ನು ಹೇಳುವ ಕೆಲವು ಕಡೆ ದೇವಯಾನಮಾರ್ಗವನ್ನು ಹೇಳಿದೆ. ಇನ್ನು ಕೆಲವು ಕಡೆ ಅದನ್ನು ಹೇಳಿಲ್ಲ ಆ ಮಾರ್ಗವನ್ನು ಹೇಳದೆ ಇರುವ ಕಡೆ ಅದನ್ನು ಕೂಡಿಸಿಕೊಳ್ಳಬೇಕೇ ಹೇಗೆ?

ಸಿ— ಅಲ್ಲಿಯೂ ಆ ಮಾರ್ಗದ ಮಾತನ್ನು ಕೂಡಿಸಿಕೊಳ್ಳಬೇಕು. ಒಂದು ಕಡೆ ಅದನ್ನು ಹೇಳದೆ ಇದ್ದ ಮಾತ್ರಕ್ಕೇ ವಿರೋಧವೇನೂ ಇಲ್ಲ. ಶ್ರುತಿಸ್ಮೃತಿಗಳನ್ನು ನೋಡಿದರೆ ಎಲ್ಲ ಸಗುಣವಿದ್ಯೆಗಳಲ್ಲಿಯೂ ದೇವಯಾನ ಮಾರ್ಗವು ಉಂಟೆಂದು ತಿಳಿಯಬರುವದು. —೩೧

೧೯ ಅಧಿಕಾರಿಕಪುರುಷರು ಪ್ರಾರಬ್ಧಕರ್ಮವಿರುವವರೆಗೆ ಇರುವರು (೩೨)

ಪೂ— ವಿದ್ವಾಂಸನು ಸತ್ತಮೇಲೆ ಮತ್ತೆ ದೇಹವನ್ನು ಹೊಂದುವನೆಂದು ತೋರುತ್ತದೆ. ಇತಿಹಾಸಪುರಾಣಗಳಲ್ಲಿ ವಿದ್ವಾಂಸನಾದವನಿಗೂ ಮತ್ತೆ ಜನ್ಮವು ಕಂಡುಬಂದಿದೆ. ಆದ್ದರಿಂದ ಜ್ಞಾನದಿಂದ ಮೋಕ್ಷವು ಬರುವದೆಂಬ ಮಾತು ಸರಿಹೋಗುವದಿಲ್ಲವಲ್ಲ!

ಸಿ— ಜ್ಞಾನದಿಂದ ಮೋಕ್ಷವು ಬಂದೇ ಬರುವದು. ವಸಿಷ್ಠರೇ ಮೊದಲಾದವರು ಪ್ರಾರಬ್ಧಕರ್ಮದಿಂದ ಲೋಕಾನುಗ್ರಹಾರ್ಥವಾಗಿ ಈಶ್ವರ

ನಿಂದ ನಿಯಮಿಸಲ್ಪಟ್ಟವರಾಗಿದ್ದಾರೆ. ಪ್ರಾರಬ್ಧಕರ್ಮವು ತೀರಿದ ಮೇಲೆ ಅವರು ವಿದೇಹಕೈವಲ್ಯವನ್ನು ಹೊಂದುವರು. —೩೨

೨೦ ನಿರ್ಗುಣವಿದ್ಯೆಯನ್ನು ಹೇಳುವಾಗ ಅಲ್ಲಲ್ಲಿ ಹೇಳಿರುವ ಎಲ್ಲ ನಿಷೇಧ ಪದಗಳನ್ನೂ ಕೂಡಿಸಿಕೊಳ್ಳಬೇಕು (೩೩)

**ಪೂ**— 'ಪರಮಾತ್ಮನು ಹಾಗಲ್ಲ; ಹೀಗಲ್ಲ' ಎಂದು ಹೇಳುವಾಗ ಕೆಲವು ಕಡೆ 'ಸ್ಥೂಲವಲ್ಲ, ದೀರ್ಘವಲ್ಲ' ಎಂದು ಮುಂತಾಗಿದೆ. ಇನ್ನು ಕೆಲವು ಕಡೆ ಮತ್ತೆ ಕೆಲವು ವಿಶೇಷಗಳಿಲ್ಲವೆಂದು ಹೇಳಿದೆ. ಹಾಗೆ ಹೇಳುವ ಎಲ್ಲ ಪದಗಳನ್ನೂ ಎಲ್ಲ ಕಡೆಯಲ್ಲಿಯೂ ಏಕೆ ಕೂಡಿಸಿಕೊಳ್ಳಬೇಕು ?

**ಸಿ**— ಯಾವದೊಂದು ವಿಶೇಷವೂ ಇಲ್ಲದ ಪರಮಾತ್ಮನನ್ನು ತಿಳಿಯು ವದಕ್ಕೆ ಅಷ್ಟು ಪದಗಳೂ ಅನುಕೂಲವಾಗಿರುವದರಿಂದ ಎಲ್ಲವನ್ನೂ ಕೂಡಿಸಿಕೊಳ್ಳಬೇಕು. ಜಾಮದಗ್ನ್ಯವೆಂಬ ಒಂದು ಅಹೀನ ಉಂಟು. ಅದರಲ್ಲಿ ಪುರೋಡಾಶವನ್ನು ಹೋಮದ್ರವ್ಯವಾಗಿ ಉಳ್ಳ "ಉಪಸತ್" ಎಂಬ ಹೆಸರಿನ ಯಾಗಗಳು ಹೇಳಲ್ಪಟ್ಟಿವೆ. ಆ ಯಾಗಕ್ಕೆ ಅಂಗವಾಗಿ ಸಾಮವೇದದಲ್ಲಿರುವ ಕೆಲವು ಮಂತ್ರಗಳು ಬರುತ್ತವೆ. ಅವುಗಳನ್ನು ಇಲ್ಲಿ ಯಜುರ್ವೇದದ ಸಂಬಂಧಿಯಾದ ಅಧ್ವರ್ಯುವೇ ಹೇಳುವನು. ಅದರಂತೆ ಯೇ ನಿರ್ಗುಣವಿದ್ಯೆಯಲ್ಲಿಯೂ ಕೆಲವು ವಿಶೇಷಗಳನ್ನು ಒಂದೆಡೆ ಹೇಳ ದಿದ್ದರೂ ಮತ್ತೊಂದು ಕಡೆಯಿಂದ ಅವುಗಳನ್ನು ತಂದು ಕೂಡಿಸಿಕೊಳ್ಳ ಬೇಕು. —೩೩

೨೧ ಎರಡು ಕಡೆಯೂ ಇಬ್ಬರೆಂದು ಹೇಳಿರುವದರಿಂದ ವಿದ್ಯೆಯು ಒಂದೆ (೩೪)

**ಪೂ**— ಒಂದುಕಡೆ "ಒಂದು ಮರದಮೇಲೆ ಎರಡು ಹಕ್ಕಿಗಳಿವೆ" ಎಂದು ಮುಂತಾಗಿ ಹೇಳಿದೆ. ಇನ್ನೊಂದು ಕಡೆ "ಬುದ್ಧಿಯಲ್ಲಿ ಇಬ್ಬರು ಹೊಕ್ಕಿ ರುತ್ತಾರೆ" ಎಂದು ಮುಂತಾಗಿ ಹೇಳಿದೆ. ಎರಡು ಕಡೆ ಹೇಳಿರುವ ವಿದ್ಯೆ ಗಳು ಬೇರೆಬೇರೆಯೊ ? ಒಂದೊ ?

**ಸಿ**— ಒಂದೆಂದೇ ಹೇಳಬೇಕು. ಎರಡು ಕಡೆಯೂ ಇಬ್ಬರೆಂದು ಹೇಳಿರು ವದರಿಂದ ಹಾಗೆ ತೋರುವದು. ಎರಡು ಕಡೆಯಲ್ಲಿಯೂ ಮೊದಲಿನ ಮತ್ತು ಕಡೆಯ ಭಾಗಗಳನ್ನು ನೋಡಿದರೆ ಜೀವನಿಗಿಂತ ಬೇರೆಯಾಗಿ ಅಸಂಸಾರಿಯಾಗಿರುವ ಈಶ್ವರನನ್ನು ತೋರಿಸುವದಕ್ಕಾಗಿ ಹೊರಟಿರು

ವಂತೆ ತೋರುವದು. ಆದ್ದರಿಂದ ಎರಡು ಕಡೆ ಹೇಳಿರುವ ವಿದ್ಯೆಯೂ ಒಂದೆ. —೩೪

೨೨ ಉಷಸ್ತಿಗೆ ಮತ್ತು ಕಹೋಳನಿಗೆ ಉಪದೇಶಿಸಿದ 'ಆತ್ಮನು ಎಲ್ಲಕ್ಕೂ ಒಳಗಿನವನ.' ಎಂಬ ವಿದ್ಯೆಯು ಒಂದೆ (೩೫. ೩೬)

ಪೂ— ಬೃಹದಾರಣ್ಯಕದಲ್ಲಿ ಉಷಸ್ತಿಯ ಪ್ರಶ್ನೆಗೆ ಉತ್ತರವಾಗಿ ಎಲ್ಲಕ್ಕೂ ಒಳಗಿನ ಆತ್ಮನನ್ನು ಹೇಳಿ ಮತ್ತೆ ಕಹೋಳನಿಗೂ ಅದೇ ಉತ್ತರವನ್ನು ಹೇಳಿರುವದರಿಂದ ಒಂದೇ ಕಡೆ ಎರಡುಸಲ ಹೇಳಿರುವದನ್ನು ನೋಡಿದರೆ ವಿದ್ಯೆಯು ಬೇರೆಬೇರೆಯೆಂದು ತೋರುತ್ತದಲ್ಲ!

ಸಿ— ಹಾಗಲ್ಲ. ಆತ್ಮನು ಎಲ್ಲಕ್ಕೂ ಒಳಗಿನವನೆಂಬ ಅಂಶವು ಸಮಾನವಾದ್ದರಿಂದ ವಿದ್ಯೆಯು ಒಂದೆಂದೇ ಹೇಳಬೇಕು. ಬೇರೆಬೇರೆಯೆಂದು ಹೇಳಿದರೆ ಇಬ್ಬರು ಹೇಗೆ ಎಲ್ಲಕ್ಕೂ ಒಳಗಿನವರಾದಾರು? ಭೂಮಿಗಿಂತ ನೀರು ಒಳಗಿನದು. ನೀರಿಗಿಂತ ಬೆಂಕಿಯು ಒಳಗಿನದು. ಆದರೆ ನೀರೂ ಭೂಮಿಯೂ ಎರಡೂ ಎಲ್ಲಕ್ಕೂ ಒಳಗಿನವುಗಳು ಹೇಗಾದಾವು? ಎಲ್ಲಕ್ಕೂ ಒಳಗಿನದು ಒಂದೇ ಆಗಿರಬೇಕು. ಅದು ಆತ್ಮ. —೩೫

ಪೂ— ಹಾಗಾದರೆ ಮತ್ತೆ ಅದನ್ನೆ ಹೇಳಲು ಕಾರಣವೇನು?

ಸಿ— ಮತ್ತೆ ಹೇಳಿದ ಮಾತ್ರದಿಂದ ವಿದ್ಯೆಯು ಬೇರೆಯಾಗಲಾರದು. ಛಾಂದೋಗ್ಯದಲ್ಲಿ ಶ್ವೇತಕೇತುವಿಗೆ "ನೀನು ಬ್ರಹ್ಮ" ಎಂದು ಒಂಬತ್ತು ಸಲ ಉಪದೇಶಿಸಿರುವದನ್ನು ನೋಡಿದ್ದೇವೆ. ವಿದ್ಯೆಯು ಒಂದಾದರೂ ಅನೇಕಸಲ ಉಪದೇಶಿಸಬಹುದು. —೩೬

೨೩ ಪರಮಾತ್ಮನು ನಾನೆಂದೂ ನಾನು ಪರಮಾತ್ಮನೆಂದೂ ಎರಡು ವಿಧವಾಗಿಯೂ ಧ್ಯಾನಿಸಬೇಕು (೩೭)

ಪೂ— "ಆದಿತ್ಯಮಂಡಲದಲ್ಲಿರುವ ಹಿರಣ್ಯಗರ್ಭನು ನಾನು; ನಾನು ಆದಿತ್ಯ ಮಂಡಲದಲ್ಲಿರುವ ಹಿರಣ್ಯಗರ್ಭನು" ಎಂದಿದೆಯಷ್ಟೆ. ನಾನು ಹಿರಣ್ಯಗರ್ಭನೆಂದು ತಿಳಿಯುವದೇನೋ ಸರಿಯೆಂದಿಟ್ಟುಕೊಳ್ಳೋಣ. ಹಿರಣ್ಯಗರ್ಭನು ನಾನೆಂದು ತಿಳಿದರೆ ಈಶ್ವರನನ್ನು ಕೆಳಗಿಳಿಸಿದಂತಾಗ. ವದು. ಆದ್ದರಿಂದ ಆ ರೀತಿಯಲ್ಲಿ ಧ್ಯಾನಿಸಬಾರದೆಂದು ತೋರುತ್ತದಲ್ಲ!

ದಿಂದ 'ವಿದ್ಯೆಯಿಂದಲೇ ದೊರಕಿಸಿದ್ದು' ಮುಂತಾದ ಶ್ರುತಿವಾಕ್ಯಗಳನ್ನು ತಿರಸ್ಕರಿಸಬಾರದು. ಏಕೆಂದರೆ ಪ್ರಕರಣಕ್ಕಿಂತ ಶ್ರುತಿಯು ಬಲಿಷ್ಠ. —೪೯

ಸೂ— ಕ್ರಿಯಾಮಯವಾದ ಅಗ್ನಿಯ ಬಹಳ ಅವಯವಗಳನ್ನು ಇಲ್ಲಿ ಧ್ಯಾನಕ್ಕಾಗಿ ಹೇಳಬೇಕಾಗಿರುವದರಿಂದ ಕ್ರಿಯಾಪ್ರಕರಣದಲ್ಲಿ ಹೇಳಲಾಗಿದೆಯೇ ಹೊರತು ಬೇರೆಯಲ್ಲ. ತಮ್ಮ ತಮ್ಮ ಉಪಾಸ್ಯದೇವತೆಯಿಂದ ಕೂಡಿದ ಶಾಂಡಿಲ್ಯ ಮೊದಲಾದ ಉಪಾಸನೆಗಳು ಕರ್ಮಾಂಗವಾದಂತೆ ಈ ಮನೋಮಯಾಗ್ನಿಗಳು ಕರ್ಮಾಂಗಗಳಾಗಲಾರವು. ರಾಜಸೂಯವನ್ನು ಹೇಳುವ ಪ್ರಕರಣದಲ್ಲಿ ಅವೇಷ್ಟಿಯೆಂಬ ಇಷ್ಟಿಯನ್ನು ಹೇಳಲಾಗಿದೆ. ಆ ಅವೇಷ್ಟಿಯು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ—ಈ ಮೂರು ವರ್ಣಗಳಿಗೂ ಸಂಬಂಧಪಟ್ಟದ್ದಾಗಿದೆ. ರಾಜಸೂಯವಾದರೋ ರಾಜನಾದವನು ಮಾತ್ರ ಮಾಡತಕ್ಕದ್ದಾದ್ದರಿಂದ ಅದರ ಪ್ರಕರಣದಲ್ಲಿ ಹೇಳಿರುವ ಅವೇಷ್ಟಿಯನ್ನು ಪ್ರಕರಣದಿಂದ ಹೊರಗೆ ಹಾಕಿಕೊಳ್ಳುವ ವಾಡಿಕೆ ಇದೆ. ಅದರಂತೆ ಮನೋಮಯಾಗ್ನಿಗಳು ಕ್ರಿಯಾಮಯಾಗ್ನಿ ಪ್ರಕರಣದಲ್ಲಿ ಹೇಳಿದ್ದರೂ ಅದಕ್ಕೆ ಅಂಗವಾಗಲಾರವುಗಳಾದ್ದರಿಂದ ಪ್ರಕರಣದಿಂದ ಹೊರಗೆ ಹಾಕುವದಕ್ಕೆ ತಕ್ಕವುಗಳಾಗಿವೆ. —೫೦

,, ಅನುವಾಕ್ಯದಲ್ಲಿರುವ ಮಾನಸಯಾಗದ ಸಾದೃಶ್ಯದಿಂದ ಮನೋಮಯಾಗ್ನಿಗಳೂ ಕರ್ಮಾಂಗಗಳೆಂದು ಹೇಳುವದು ಸಾಹಸದ ಮಾತು. ಲೋಕದಲ್ಲಿ ಎಲ್ಲ ಪದಾರ್ಥಗಳೂ ಯಾವದೋ ಒಂದು ರೂಪದಿಂದ ಎಲ್ಲ ವಸ್ತುಗಳಿಗೂ ಸಮಾನವಾಗಿ ಇದ್ದೇ ಇವೆ. ಅಷ್ಟು ಮಾತ್ರದಿಂದ ತಮಗಿರುವ ವಿಶೇಷಭಾವವನ್ನು ಹೇಗೆ ಬಿಟ್ಟಾವು? ಆದಿತ್ಯಮಂಡಲದಲ್ಲಿರುವ ಪುರುಷನಿಗೂ ಅಗ್ನಿಗೂ ಮೃತ್ಯುವೆಂದು ಹೆಸರಿದೆ. ಅಷ್ಟು ಮಾತ್ರದಿಂದ ಅವರಿಬ್ಬರೂ ಒಂದಾಗುವರೆ? —೫೧

,, ಕೊನೆಕೊನೆಯಲ್ಲಿ ಶ್ರುತಿಯು 'ಎಲ್ಲಿ ಆಶೆಗಳೆಲ್ಲ ಕೊನೆಗಾಣುವವೋ ಅಂಥ ಪದವನ್ನು ವಿದ್ಯೆಯಿಂದ ಹತ್ತುವರು' ಎಂದು ಕೇವಲ ಉಪಾಸನೆಯ ಫಲವನ್ನು ಹೇಳಿದೆ. ಆದ್ದರಿಂದ ಮನೋಮಯಾಗ್ನಿಗಳು ಸ್ವತಂತ್ರಗಳಾದವುಗಳೇ ಹೊರತು ಕರ್ಮಾಂಗಗಳಲ್ಲ. —೫೨

ದಿಂದ 'ವಿದ್ಯೆಯಿಂದಲೇ ದೊರಕಿಸಿದ್ದು' ಮುಂತಾದ ಶ್ರುತಿವಾಕ್ಯಗಳನ್ನು ತಿರಸ್ಕರಿಸಬಾರದು. ಏಕೆಂದರೆ ಪ್ರಕರಣಕ್ಕಿಂತ ಶ್ರುತಿಯು ಬಲಿಷ್ಠ.—೪೯

ಸಿ— ಕ್ರಿಯಾಮಯವಾದ ಅಗ್ನಿಯು ಬಹಳ ಅವಯುವಗಳನ್ನು ಇಲ್ಲಿ ಧ್ಯಾನಕ್ಕಾಗಿ ಹೇಳಬೇಕಾಗಿರುವದರಿಂದ ಕ್ರಿಯಾಪ್ರಕರಣದಲ್ಲಿ ಹೇಳಲಾಗಿದೆಯೇ ಹೊರತು ಬೇರೆಯಲ್ಲ. ತಮ್ಮ ತಮ್ಮ ಉಪಾಸ್ಯದೇವತೆಯಿಂದ ಕೂಡಿದ ಶಾಂಡಿಲ್ಯ ಮೊದಲಾದ ಉಪಾಸನೆಗಳು ಕರ್ಮಾಂಗವಾದಂತೆ ಈ ಮನೋಮಯಾಗ್ನಿಗಳು ಕರ್ಮಾಂಗಗಳಾಗಲಾರವು. ರಾಜಸೂಯವನ್ನು ಹೇಳುವ ಪ್ರಕರಣದಲ್ಲಿ ಅವೇಷ್ಟಿಯೆಂಬ ಇಷ್ಟಿಯನ್ನು ಹೇಳಲಾಗಿದೆ. ಆ ಅವೇಷ್ಟಿಯು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ—ಈ ಮೂರು ವರ್ಣಗಳಿಗೂ ಸಂಬಂಧಪಟ್ಟದ್ದಾಗಿದೆ. ರಾಜಸೂಯವಾದರೋ ರಾಜನಾದವನು ಮಾತ್ರ ಮಾಡತಕ್ಕದ್ದಾದ್ದರಿಂದ ಅದರ ಪ್ರಕರಣದಲ್ಲಿ ಹೇಳಿರುವ ಅವೇಷ್ಟಿಯನ್ನು ಪ್ರಕರಣದಿಂದ ಹೊರಗೆ ಹಾಕಿಕೊಳ್ಳುವ ವಾಡಿಕೆ ಇದೆ. ಅದರಂತೆ ಮನೋಮಯಾಗ್ನಿಗಳು ಕ್ರಿಯಾಮಯಾಗ್ನಿ ಪ್ರಕರಣದಲ್ಲಿ ಹೇಳಿದ್ದರೂ ಅದಕ್ಕೆ ಅಂಗವಾಗಲಾರವುಗಳಾದ್ದರಿಂದ ಪ್ರಕರಣದಿಂದ ಹೊರಗೆ ಹಾಕುವದಕ್ಕೆ ತಕ್ಕವುಗಳಾಗಿವೆ. —೫೦

,, ಅಪಿವಾಕ್ಯದಲ್ಲಿರುವ ಮಾನಸಯಾಗದ ಸಾದೃಶ್ಯದಿಂದ ಮನೋಮಯಾಗ್ನಿಗಳೂ ಕರ್ಮಾಂಗಗಳೆಂದು ಹೇಳುವದು ಸಾಹಸದ ಮಾತು. ಲೋಕದಲ್ಲಿ ಎಲ್ಲ ಪದಾರ್ಥಗಳೂ ಯಾವದೋ ಒಂದು ರೂಪದಿಂದ ಎಲ್ಲ ವಸ್ತುಗಳಿಗೂ ಸಮಾನವಾಗಿ ಇದ್ದೇ ಇವೆ. ಅಷ್ಟು ಮಾತ್ರದಿಂದ ತಮ್ಮಲ್ಲಿರುವ ವಿಷಮಭಾವವನ್ನು ಹೇಗೆ ಬಿಟ್ಟಾವು? ಆದಿತ್ಯಮಂಡಲದಲ್ಲಿರುವ ಪುರುಷನಿಗೂ ಅಗ್ನಿಗೂ ಮೃತ್ಯುವೆಂದು ಹೆಸರಿದೆ. ಅಷ್ಟು ಮಾತ್ರದಿಂದ ಅವರಿಬ್ಬರೂ ಒಂದಾಗುವರೆ? —೫೧

,, ಕೊನೆಕೊನೆಯಲ್ಲಿ ಶ್ರುತಿಯು 'ಎಲ್ಲಿ ಆಸೆಗಳೆಲ್ಲ ಕೊನೆಗಾಣುವವೋ ಅಂಥ ಪದವಿಯನ್ನು ವಿದ್ಯೆಯಿಂದ ಹತ್ತುವರು' ಎಂದು ಕೇವಲ ಉಪಾಸನೆಯ ಫಲವನ್ನು ಹೇಳಿದೆ. ಆದ್ದರಿಂದ ಮನೋಮಯಾಗ್ನಿಗಳು ಸ್ವತಂತ್ರಗಳಾದವುಗಳೇ ಹೊರತು ಕರ್ಮಾಂಗಗಳಲ್ಲ. —೫೨

ಮಾಡುತ್ತಾರೆ' ಎಂದು ಮುಂತಾಗಿ ಹೇಳಿರುವದರಿಂದ ಉಪಾಸನೆ ಯನ್ನು ಮಾಡದಿದ್ದರೂ ಕರ್ಮಕ್ಕೆ ಲೋಪವಿಲ್ಲ. —೪೨

೨೮ ವಾಯುವನ್ನೂ ಪ್ರಾಣವನ್ನೂ ಬೇರೆಬೇರೆ ಉಪಾಸನೆಮಾಡಬೇಕು (೪೩)

**ಪೂ**— ಸಂವರ್ಗವಿದ್ಯೆಯನ್ನು ಹೇಳುವಾಗ ಕೊನೆಗಾಲದಲ್ಲಿ ಎಲ್ಲ ವನ್ನೂ ತನ್ನೊಳಕೊಳ್ಳುವ ವಿಷಯದಲ್ಲಿ ಆಧಿದೈವಿಕವಸ್ತುಗಳಲ್ಲಿ ವಾಯುವು ಸಂವರ್ಗ(ತನ್ನೊಳಕೊಳ್ಳುವದು)ವೆಂದೂ ಅಧ್ಯಾತ್ಮ ವಸ್ತುಗಳಲ್ಲಿ ಪ್ರಾಣನು ಸಂವರ್ಗವೆಂದೂ ಹೇಳಿದೆ. ಆದ್ದರಿಂದ ವಾಯು ವನ್ನೂ ಪ್ರಾಣನನ್ನೂ ಜೊತೆಯಲ್ಲಿಯೇ ಉಪಾಸನೆಮಾಡಬೇಕೆಂದ ತೋರುತ್ತದೆ. 'ಯಾವುದು ಪ್ರಾಣವೊ ಅದೇ ವಾಯು' ಎಂದು ಮುಂ ತಾಗಿ ಹೇಳಿರುವದರಿಂದಲೂ ಹಾಗೆಯೇ ಹೇಳಬೇಕಾಗುತ್ತದೆಯಲ್ಲ!

**ಸಿ**— ಅವರನ್ನು ಬೇರೆಬೇರೆಯಾಗಿಯೇ ಉಪಾಸನೆಮಾಡಬೇಕು. ಏಕೆಂ ದರೆ ವಾಯುಪ್ರಾಣಗಳು ಬೇರೆಬೇರೆಯಾಗಿ ಹೇಳಲಾಗಿವೆ. ತತ್ತ್ವವು ಒಂದೇ ಆದರೂ ಧ್ಯಾನದ ಅನುಕೂಲತೆಗಾಗಿ ಆಧ್ಯಾತ್ಮಿಕವೆಂಬ ಮತ್ತು ಆಧಿದೈವಿಕವೆಂಬ ವಿಭಾಗದಿಂದ ಹೇಳಿರುವದರಿಂದ ಬೇರೆಬೇರೆಯಾ ಗಿಯೇ ಧ್ಯಾನಿಸಬೇಕು. ರಾಜನಾದ ಇಂದ್ರನಿಗೆಂದೂ ಅಧಿರಾಜನಾದ ಇಂದ್ರನಿಗೆಂದೂ ಸ್ವರಾಜನಾದ ಇಂದ್ರನಿಗೆಂದೂ ಬೇರೆಬೇರೆ ಮೂರು ವಾಕ್ಯಗಳಲ್ಲಿ ಇಂದ್ರನನ್ನು ಕುರಿತು ಯಾಗವು ಹೇಳಲಾಗಿದೆ. ಅಲ್ಲಿ ಇಂ ದ್ರನು ಒಬ್ಬನಾದರೂ ಗುಣಗಳು ಬೇರೆಯಾಗಿರುವದರಿಂದ ಅವರಿಂದ ಕೂಡಿದ ದೇವತೆಯೂ ಬೇರೆಯಾಯಿತು. ಆದ್ದರಿಂದ ಯಾಗವೂ ಬೇರೆ ಯಾಗುವದು. ಅದರಂತೆ ವಾಯುಪ್ರಾಣಗಳನ್ನು ಬೇರೆಬೇರೆಯಾಗಿ ಚಿಂತಿಸಬೇಕು. —೪೩

೨೯ ವಾಜಸನೇಯಕದ ಮೊದಲಾದ ಅಗ್ನಿಗಳು ಕರ್ಮಕ್ಕೆ ಅಂಗಗಳಲ್ಲ (೪೪...೫೨)

**ಪೂ**— ವಾಜಸನೇಯಕದ ಅಗ್ನಿರಹಸ್ಯದಲ್ಲಿ ಮನಸ್ಸಿನಿಂದ ದೊರಕಿಸಿದ ಅಗ್ನಿಗಳು ಮತ್ತು ವಾಗಿಂದ್ರಿಯದಿಂದ ದೊರಕಿಸಿದ ಅಗ್ನಿಗಳು ಎಂಬ ಮುಂತಾದ ಮಾತುಗಳಿವೆ. ಆ ಅಗ್ನಿಗಳು ಕರ್ಮವನ್ನು ಹೇಳುವ ಕಡೆ ಬಂದಿರುವದರಿಂದ ಕರ್ಮಕ್ಕೆ ಅಂಗಗಳಷ್ಟೆ?

ಸಿ— ಅವು ಕರ್ಮಕ್ಕೆ ಅಂಗಗಳಲ್ಲ. 'ಮನೋವೃತ್ತಿಗಳನ್ನೆ ಅಗ್ನಿಯೆಂದು ಉಪಾಸನೆಮಾಡುವವನಿಗೆ ಲೋಕದಲ್ಲಿ ಜನಗಳು ಮಾಡುವ ಸಂಕಲ್ಪಗಳೆಲ್ಲವೂ ಕರ್ಮಾಂಗವಾದ ಅಗ್ನಿಗೆ ಅಂಗವಾದ ಇಟ್ಟಿಗೆಗಳಾಗಿ ಪರಿಣಮಿಸುವವು' ಎಂದು ಮುಂತಾಗಿರುವ ಅನೇಕ ಲಿಂಗಗಳನ್ನು ನೋಡಿದರೆ ಮನೋಮಯವೇ ಮೊದಲಾದ ಅಗ್ನಿಗಳು ಸ್ವತಂತ್ರಗಳೆ ಹೊರತು ಕರ್ಮಾಂಗಗಳಲ್ಲ. —೪೪

ಪೂ— ಕರ್ಮವನ್ನು ಹೇಳುವ ಪ್ರಕರಣದಲ್ಲಿ ಹೇಳಿರುವದನ್ನು ನೋಡಿದರೆ ಕ್ರಿಯಾಮಯವಾದ ಅಗ್ನಿಗಳೊಡನೆ ಈ ಅಗ್ನಿಗಳನ್ನು ವಿಕಲ್ಪವಾಗಿ ಹೇಳಿದಂತೆ ತೋರುವದು. ನೀವು ಹೇಳುವ ಲಿಂಗವು ಅಷ್ಟು ಬಲವಲ್ಲ. ಅವನ್ನು ತೋರಿಸುವ ವಾಕ್ಯವು ಕಲ್ಪಿತಾಗ್ನಿಗಳನ್ನು ಹೊಗಳುವದಕ್ಕೆ ಮಾತ್ರ ಹೊರಟಿದ್ದು. ದಶರಾತ್ರವೆಂಬ ಕ್ರತುವಿನಲ್ಲಿ ಅವಿವಾಕ್ಯವೆಂಬ ಹನ್ನೊಂದನೆ ಅಹಸ್ಸಿನಲ್ಲಿ ಒಂದು ಮಾನಸಯಾಗವು ಹೇಳಲಾಗಿದೆ. ಆ ಅಹಸ್ಸಿನಲ್ಲಿ ಬೇರೆಬೇರೆ ಅನೇಕ ವಾಕ್ಯಗಳ ಉಚ್ಚಾರಣೆ ಇಲ್ಲದಿರುವದರಿಂದ ಅದಕ್ಕೆ ಅವಿವಾಕ್ಯವೆಂಬ ಹೆಸರು ಬಂದಿದೆ. ಆ ಮಾನಸಯಾಗವು ದಶರಾತ್ರಕ್ಕೆ ಅಂಗವೆಂದು ಸಿದ್ಧವಾಗಿದೆ. ಅದರಂತೆ ಮನೋಮಯವಾದ ಅಗ್ನಿಗಳು ಕ್ರಿಯಾಮಯವಾದ ಅಗ್ನಿಗೆ ಅಂಗವಾದವುಗಳೆಂದು ತಿಳಿಯಬೇಕಾಗುತ್ತದಲ್ಲ! —೪೫

,, "ಮುವತ್ತಾರು ಸಾವಿರ ಮನೋಮಯಾಗ್ನಿಗಳೊ ನೋಡಿದರು. ಅವುಗಳಲ್ಲಿ ಒಂದೊಂದು ಅಗ್ನಿಯೂ ಈಗ ಕಟ್ಟುತ್ತಿರುವ ಪೂರ್ವದಷ್ಟಿದೆ" ಎಂದು ಕರ್ಮಾಂಗವಾದ ಪೂರ್ವದ ಮಹಿಮೆಯನ್ನು ಮನೋಮಯಾಗ್ನಿಗಳಿಗೆ ಹೇಳಿರುವದರಿಂದ ಅವು ಕರ್ಮಾಂಗಗಳೆಂದು ತೋರುತ್ತವೆ. —೪೬

ಸಿ— ಮನೋಮಯಾಗ್ನಿಗಳು ಸ್ವತಂತ್ರವಾದವುಗಳು. ಏಕೆಂದರೆ ಶ್ರುತಿಯಲ್ಲಿ 'ವಿದ್ಯೆಯಿಂದಲೆ ದೊರಕಿದ ಆ ಅಗ್ನಿಗಳು' ಎಂಬದಾಗಿ ಒತ್ತಿ ಹೇಳಿದೆ. —೪೭

,, ಈ ಅಗ್ನಿಗಳು ಸ್ವತಂತ್ರಗಳೆಂಬದಕ್ಕೆ ಲಿಂಗವನ್ನು ಮೊದಲೇ ಹೇಳಿದ್ದೇವೆ. —೪೮

,, ಕ್ರಿಯಾಮಯವಾದ ಅಗ್ನಿಗಳ ಪ್ರಕರಣದಲ್ಲಿ ಹೇಳಿದ ಮಾತ್ರ

ಸಿ— ಅಲ್ಲ. ಹೃದಯವೆಂಬ ಸ್ಥಾನವೂ ಉಪಾಸ್ಯನಾಗಿ ಪರಮಾತ್ಮನೂ ಎರಡು ಕಡೆಯಲ್ಲಿಯೂ ಸಮವಾಗಿ ತೋರುವವರಿಂದ ವಿದ್ಯೆಯು ಒಂದೇ ಎಂದು ಹೇಳಬೇಕು. ವರ್ಣಾಶ್ರಮವ್ಯವಸ್ಥೆಯು ಮೀರದಷ್ಟ ದಂತೆ ಮಾಡುವವನೆಂಬುದೂ ಎರಡುಕಡೆಯೂ ಸಮವಾಗಿದೆ. ಪ್ರಯೋಜನವೂ ಒಂದೇ ಆಗಿದೆ. ಆದ್ದರಿಂದ ವಿದ್ಯೆಯು ಒಂದೇ. ಒಂದುಕಡೆ ಇರುವ ಸತ್ಯಕಾಮತ್ವವನ್ನು ಇನ್ನೊಂದು ಕಡೆಗೂ ಇನ್ನೊಂದು ಕಡೆ ಇರುವ ವಶಿತ್ವವನ್ನು ಮತ್ತೊಂದುಕಡೆಗೂ ಕೂಡಿಸಿಕೊಳ್ಳಬೇಕು. —೩೯

೩೬ ಊಟವಿಲ್ಲದಿದ್ದರೆ ಪ್ರಾಣಾಗ್ನಿಹೋತ್ರವಿಲ್ಲ (೪೦. ೪೧)

**ಪೂ**— ವೈಶ್ವಾನರವಿದ್ಯೆಯನ್ನು ಹೇಳುವಾಗ ಉಪಾಸಕನು ಮೊದಲು ತೆಗೆದುಕೊಳ್ಳುವ ಪ್ರಾಣಾಹುತಿಗಳನ್ನು ಅಗ್ನಿಹೋತ್ರವೆಂದು ಹೇಳಿದೆ. ವೈಶ್ವಾನರೋಪಾಸಕನು ಅತಿಥಿಗಳ ಊಟಕ್ಕಿಂತ ಮುಂಚೆಯೇ ಪ್ರಾಣಾಗ್ನಿಹೋತ್ರವನ್ನು ಮಾಡಬೇಕೆಂದು ಹೇಳಿದೆ. ಇದನ್ನು ನೋಡಿದರೆ ಅತಿಥಿಗಳ ಊಟವು ಮುಂಚೆಯಾಗುವ ಕ್ರಮವನ್ನು ನಡೆಸಿಮಾಡದಿರುವ ವೇದವಕ್ಕೆ ಉಪಾಸಕನು ಊಟ ಮಾಡದಿದ್ದರೂ ಅನ್ನದ ಬದಲು ವಸನ್ನಾದರೂ ಇಟ್ಟುಕೊಂಡು ಪ್ರಾಣಾಗ್ನಿಹೋತ್ರವನ್ನು ಮಾಡಲೇಬೇಕೆಂದು ಅಭಿಪ್ರಾಯವಿದ್ದಂತೆ ಕಾಣುವದಲ್ಲ ! —೪೦

ಸಿ— ಹಾಗಲ್ಲ; 'ಊಟವನ್ನು ಮಾಡಬೇಕಾದಾಗ' ಎಂದಿರುವದರಿಂದ ಊಟವಿಲ್ಲದಿದ್ದರೆ ಅಗ್ನಿಹೋತ್ರವು ಹೇಗೆ ಬಂದೀತು ? —೪೧

೩೭ ಕರ್ಮಾಂಗವನ್ನು ಅವಲಂಬಿಸಿ ಹೇಳಿರುವ ಉಪಾಸನೆಗಳನ್ನು ಮಾಡದಿದ್ದರೂ ಕರ್ಮಕ್ಕೆ ಲೋಪವಿಲ್ಲ (೪೨)

**ಪೂ**— ಕರ್ಮಕ್ಕೆ ಅಂಗಗಳಾದ ಉದ್ಗೀಥ ಮೊದಲಾದವುಗಳನ್ನು ಅವಲಂಬಿಸಿ ವೇದದಲ್ಲಿ ಅನೇಕ ಉಪಾಸನೆಗಳು ಹೇಳಲಾಗಿವೆಯಷ್ಟೆ. ಅವುಗಳನ್ನು ಮಾಡಿದರೆ ಕರ್ಮಕ್ಕೆ ಫಲವೆಂದೂ ಇಲ್ಲದಿದ್ದರೆ ಅದಕ್ಕೆ ಫಲವು ಬರುವುದಿಲ್ಲವೆಂದೂ ಹೇಳಬೇಕೋ ಹೇಗೆ ?

ಸಿ— ಅವುಗಳನ್ನು ಮಾಡದಿದ್ದರೂ ಕರ್ಮಕ್ಕೆ ಫಲವು ಬರದೆ ಇರುವದಿಲ್ಲ ; ಮಾಡಿದರೆ ಫಲದಲ್ಲಿ ಹೆಚ್ಚುಗಾರಿಕೆ ಇರುವದು. 'ಅವುಗಳನ್ನು ಉಪಾಸನೆ ಮಾಡುವವನೂ ಮಾಡದವನೂ ಇಬ್ಬರೂ ಕರ್ಮವನ್ನು ಮಾಡಿಯೇ

ವೆಂಬ ಶಬ್ದವು ಸಮಾನವಾಗಿದೆ. ಆದ್ದರಿಂದ ಉದ್ಗೀಥೋಪಾಸನೆಯನ್ನು ಮತ್ತೊಂದುಕಡೆಗೂ ಕೂಡಿಸಿಕೊಳ್ಳಬೇಕು. —೫೫

,, ಅಥವಾ ಇಲ್ಲಿ ವಿರೋಧವು ಬರುವದೆಂಬ ಸಂಶಯವೇ ತಲೇ ಎತ್ತುವದಿಲ್ಲ. ಒಂದು ಶಾಖೆಯಲ್ಲಿ ಹೇಳಿರುವ ಮಂತ್ರವೆ ಮೊದಲಾದವುಗಳನ್ನು ಅದನ್ನು ಹೇಳದಿರುವ ಮತ್ತೊಂದು ಶಾಖೆಯಲ್ಲಿ ಅನುಸಂಧಾನ ಮಾಡಿರುವದನ್ನು ನೋಡಿದ್ದೇವೆ. ಅದರಂತೆಯೇ ಕರ್ಮಾಂಗಗಳನ್ನು ಅವಲಂಬಿಸಿದ ಉಪಾಸನೆಗಳೂ ಆಗಬಹುದು. —೫೬

೩೨ ಎಲ್ಲ ಅವಯವಗಳಿಂದ ಕೂಡಿದ ಉಪಾಸನೆ ದೊಡ್ಡದು (೫೭)

**ಪೂ**— ವೈಶ್ವಾನರವಿದ್ಯೆಯಲ್ಲಿ ವೈಶ್ವಾನರನ ಒಂದೊಂದು ಅವಯವವಾದ ದ್ಯುಲೋಕ ಮೊದಲಾದವುಗಳನ್ನೆ ವೈಶ್ವಾನರನೆಂದು ತಿಳಿದಿದ್ದ ಪ್ರಾಚೀನಶಾಲ ಮೊದಲಾದವರ ಅಭಿಪ್ರಾಯಗಳನ್ನು ನಿಂದೆಮಾಡಿ ಎಲ್ಲ ಅವಯವಗಳಿಂದಲೂ ಕೂಡಿದ ವೈಶ್ವಾನರೋಪಾಸನೆಯು ಹೇಳಲಾಗಿದೆಯಷ್ಟೆ. ಅಲ್ಲಿ ಒಂದೊಂದು ಅವಯವವನ್ನೆ ವೈಶ್ವಾನರನೆಂದು ತಿಳಿದರೇನು ತೊಂದರೆ?

**ಸಿ**— ಒಂದೊಂದು ಅವಯವವನ್ನೆ ವೈಶ್ವಾನರನೆಂದು ತಿಳಿಯುವ ಪಕ್ಷವನ್ನು ನಿಂದೆ ಮಾಡಿರುವದರಿಂದ ಹಾಗೆ ಉಪಾಸನೆಮಾಡಬಾರದು. ಎಲ್ಲ ಅವಯವಗಳೂ ಸೇರಿದ ಉಪಾಸನೆಯೇ ದೊಡ್ಡದು. ಎಲ್ಲ ಅವಯವಗಳಿಂದ ಸೇರಿದರೇ ಅಗ್ನಿಹೋತ್ರದರ್ಶಪೂರ್ಣಮಾಸಗಳು ಫಲಕಾರಿಯಾಗುವಂತೆ ಎಲ್ಲ ಅವಯವಗಳಿಂದ ಕೂಡಿದ ವೈಶ್ವಾನರನ ಉಪಾಸನೆಯೆ ಫಲಕಾರಿ. ಇದರಿಂದ ಒಂದೊಂದು ಅವಯವವನ್ನು ಉಪಾಸನೆ ಮಾಡಿದರೂ ಸ್ವಲ್ಪವಾದರೂ ಫಲವು ಲಭಿಸುವದೆಂದು ತಿಳಿಯಬಾರದು. ಏಕೆಂದರೆ ಬಿಡಿಬಿಡಿಯಾದ ಅವಯವಮಾತ್ರವನ್ನು ಉಪಾಸನೆ ಮಾಡುವ ಪಕ್ಷವು ವೇದದಲ್ಲಿಯೇ ನಿಂದಿಸಲ್ಪಟ್ಟಿದೆ. —೫೭

೩೩ ದಹರ ಮೊದಲಾದ ಉಪಾಸನೆಯೂ ಶಾಂಡಿಲ್ಯ ಮೊದಲಾದ ಉಪಾಸನೆಯೂ ಒಂದಲ್ಲ (೫೮)

**ಪೂ**— ಹಾಗಾದರೆ ದಹರೋಪಾಸನೆಯನ್ನೂ ಶಾಂಡಿಲ್ಯವಿದ್ಯೆಯನ್ನೂ ಇತರವಿದ್ಯೆಗಳನ್ನೂ ಸೇರಿಸಿ ಮಾಡಬೇಕೆಂದು ಹೇಳಿದಂತಾಗುವದಲ್ಲ!

ಅಲ್ಲಿ ಎಲ್ಲ ಕಡೆಯಲ್ಲಿಯೂ ಉಪಾಸ್ಯನಾದ ಪರಮಾತ್ಮನು ಒಬ್ಬನೆ ಆದ್ದ ರಿಂದ ಅವುಗಳೆಲ್ಲ ಒಂದೇ ಉಪಾಸನೆ.

ಸಿ— ಹಾಗಲ್ಲ; ದಹರ ಮೊದಲಾದ ವಿದ್ಯೆಗಳನ್ನು ವಿಧಾನಮಾಡುವ ಶಬ್ದ ಗಳು ಬೇರೆಬೇರೆಯಾಗಿವೆ. ಶಬ್ದವು ಬೇರೆಬೇರೆಯಾದರೆ ಕರ್ಮವು ಬೇರೆ ಬೇರೆಯೆಂದು ಪೂರ್ವಮೀಮಾಂಸಕರು ಹೇಳುವರು. ಮನೋಮಯ ತ್ವವೇ ಮೊದಲಾದ ಗುಣಗಳೂ ಬೇರೆಬೇರೆಯಾಗಿರುವದರಿಂದ ಆ ವಿದ್ಯೆ ಗಳು ಒಂದಲ್ಲ. —೫೭

೩೪ ದಹರ ಮೊದಲಾದ ಉಪಾಸನೆಯನ್ನೂ ಶಾಂಡಿಲ್ಯ ಮೊದಲಾದ ಉಪಾಸನೆಯನ್ನೂ ಸೇರಿಸಿ ಮಾಡಬಾರದು (೫೮)

ಪೂ— ದಹರವಿದ್ಯೆಯೂ ಶಾಂಡಿಲ್ಯವಿದ್ಯೆಯೂ ಬೇರೆಬೇರೆಯಾದರೆ ಅವೆ ರಡನ್ನೂ ಸೇರಿಸಿಯೇ ಉಪಾಸನೆ ಮಾಡಬೇಕೆಂಬ ನಿಯಮವು ಇರುವ ದಿಲ್ಲ. ಯಾವದಾದರೂ ಒಂದನ್ನು ಮಾತ್ರವೇ ಮಾಡಬೇಕೆಂಬ ನಿಯ ಮವೂ ಇಲ್ಲ. ಏಕೆಂದರೆ ಒಂದು ಉಪಾಸನೆಯನ್ನು ಮಾಡುವವನು ಮತ್ತೊಂದನ್ನು ಮಾಡಬಾರದೆಂದುಎಲ್ಲಿಯೂ ಹೇಳಿಲ್ಲ. ಆದ್ದರಿಂದ ತನ್ನ ಇಚ್ಛೆಯಂತೆ ಬೇರೆ ಜಾತಿಯ ವಿದ್ಯೆಗಳನ್ನಾದರೂ ಸೇರಿಸಿ ಅನುಷ್ಠಾನ ಮಾಡಿದರೂ ಮಾಡಬಹುದು. ಒಂದನ್ನು ಮಾತ್ರವೇ ಮಾಡಿದರೂ ಮಾಡಬಹುದು. ಇದಕ್ಕೆ ನಿಮ್ಮ ಅಭಿಪ್ರಾಯವೇನು ?

ಸಿ — ಆ ಉಪಾಸನೆಗಳು ಒಂದೇ ಫಲವನ್ನು ಕೊಡುವವುಗಳಾದ್ದರಿಂದ ಅವುಗಳಲ್ಲಿ ಯಾವದಾದರೂ ಒಂದನ್ನು ಮಾತ್ರವೆ ಅನುಷ್ಠಾನ ಮಾಡಿ ದರೂ ಫಲವು ಬರುವದು. ಹೀಗಿರುವಾಗ ಇನ್ನೊಂದನ್ನು ಸೇರಿಸುವ ದೇಕೆ? ಇನ್ನೊಂದುಪಾಸನೆಯನ್ನೂ ಮಾಡುವದಕ್ಕೆ ಹೊರಟರೆ ಚಿತ್ತ ವಿಕ್ಷೇಪವು ಉಂಟಾಗುವದು. —೫೯

೩೫ ಕಾಮ್ಯವಾದ ಉಪಾಸನೆಗಳನ್ನು ತನ್ನ ಇಷ್ಟದಂತೆ ಸೇರಿಸಿಕೊಳ್ಳಬಹುದು (೬೦)

ಪೂ— ಕಾಮ್ಯವಾದ ಉಪಾಸನೆಗಳಿಷ್ಟೋ ಇರುವವಷ್ಟೆ. ನೀವು ಹಿಂದೆ ಹೇಳಿದ ರೀತಿಯಂತೆ ಅವುಗಳನ್ನು ಕೂಡಿಸಿಕೊಳ್ಳಕೂಡದೆಂದು ತೋರು ತ್ತದ!

ಸಿ— ಹಾಗಲ್ಲ. ಮನುಷ್ಯನಲ್ಲಿರುವ ಫಲಾಪೇಕ್ಷೆಗಳನ್ನನುಸರಿಸಿ ಬೇರೆಬೇರೆ

ಫಲಗಳನ್ನು ಕೊಡುವ ಉಪಾಸನೆಗಳು ಹೇಳಲಾಗಿವೆ. ಮನುಷ್ಯನು ತನ್ನ ಇಚ್ಛೆಯಂತೆ ಅವುಗಳಲ್ಲಿ ಎಷ್ಟನ್ನು ಬೇಕಾದರೂ ಕೂಡಿಸಿಕೊಂಡು ಉಪಾಸನೆಮಾಡಬಹುದು. ಮೊದಲು ಹೇಳಿದ್ದು ಹಾಗಲ್ಲ. ಅಲ್ಲಿ ಫಲವು ಒಂದೆ. ಆದ್ದರಿಂದ ಒಂದುಪಾಸನೆಯಿಂದಲೆ ಫಲವು ಬರುವಾಗ ಇನ್ನೊಂದು ವ್ಯರ್ಥವೆಂದು ಅಲ್ಲಿಯ ಅಭಿಪ್ರಾಯ. ಇಲ್ಲಿ ಬೇರೆಬೇರೆ ಫಲಗಳಿರುವದರಿಂದ ಮನುಷ್ಯನ ಇಚ್ಛೆಯಂತೆ ಕೂಡಿಸಿಕೊಳ್ಳಬಹುದೆಂಬ ಮಾತನ್ನೆ ಒಪ್ಪಬೇಕು. —೬೦

೪೬ ಕರ್ಮಾಂಗವಾದ ಉದ್ಗೀಥವನ್ನು ಅವಲಂಬಿಸಿ ಹೇಳಿರುವ ಉಪಾಸನೆಗಳನ್ನು ನಮ್ಮ ಇಚ್ಛೆಯಂತೆ ಕೂಡಿಸಿಕೊಳ್ಳಬಹುದು (೬೧ .೬೬)

ಪೂ – ಕರ್ಮಾಂಗವಾದ ಉದ್ಗೀಥವನ್ನು ಅವಲಂಬಿಸಿ ಬೇರೆಬೇರೆ ಶಾಖೆಗಳಲ್ಲ ಅನೇಕ ಉಪಾಸನೆಗಳು ಹೇಳಲಾಗಿವೆ. ಕರ್ಮಾಂಗವಾದ ಉದ್ಗೀಥವು ಎಲ್ಲ ವೇದಗಳಲ್ಲಿಯೂ ಬರುವದರಿಂದ ಅದನ್ನನುಸರಿಸಿ ಅದನ್ನು ಅವಲಂಬಿಸಿರುವ ಉಪಾಸನೆಗಳು ಒಟ್ಟಿಗೆ ಬಂದು ನಿಲ್ಲುವವು. —೬೧

,, ಆಶ್ರಯವಾದ ಸ್ತೋತ್ರವೇ ಮೊದಲಾದವುಗಳು ಎಲ್ಲ ವೇದಗಳಲ್ಲಿಯೂ ಬರುವದರಿಂದ ಅದನ್ನು ಅವಲಂಬಿಸಿದ ಉಪಾಸನೆಗಳೂ ಬಂದೇ ಬರುವವು. 'ಉಪಾಸನೆಗಳನ್ನು ಸೇರಿಸಿ ಮಾಡು' ಎಂದು ಮತ್ತೆ ಹೇಳಬೇಕಾಗಿಲ್ಲ. —೬೨

,, "ಉದ್ಗಾತನು ತಾನು ಉದ್ಗೀಥವನ್ನು ತಪ್ಪುಸ್ವರದಿಂದ ಹೇಳಿದ್ದರಿಂದ ಉದ್ಗೀಥವನ್ನು ಕೆಡಿಸಿದ್ದರೂ 'ಪ್ರಣವವು ಉದ್ಗೀಥವು' ಎಂದು ಧ್ಯಾನ ಮಾಡಿರುವ ಹೋತನ ಸರಿಯಾದ ಶಂಸನದಿಂದ ಸರಿಪಡಿಸಿಕೊಳ್ಳುತ್ತಾನೆ"–ಹೀಗೆಂದು ಹೇಳಿರುವದರಿಂದ ಬೇರೆ ವೇದದಲ್ಲಿ ಹೇಳಿದ್ದರೂ ಅದನ್ನು ಕೂಡಿಸಿಕೊಳ್ಳಬೇಕೆಂದೇ ತೋರುತ್ತದೆ. —೬೩

,, ಎಲ್ಲವೇದಗಳಲ್ಲಿಯೂ ಉದ್ಗೀಥವೆಂಬ ಆಶ್ರಯವು ಬಂದೇ ಬರುವದು. ಆಶ್ರಯವು ಸಮಾನವಾಗಿ ಬಂದಿರುವಾಗ ಅದನ್ನು ಅವಲಂಬಿಸಿರುವ ಉಪಾಸನೆಗಳು ಹೇಗೆ ತಾನೆ ಒಟ್ಟಿಗೆ ಸೇರದೆ ಇದ್ದಾವು? –೬೪

ಸಿ— 'ಚಮಸವನ್ನು ಮೇಲಕ್ಕೆತ್ತಿ ಸ್ತುತಿಮಾಡುತ್ತಾನೆ' ಎಂದು ಮುಂ

ತವಾಗಿ ಶ್ರುತಿ ಇರುವದರಿಂದ ಸ್ತೋತ್ರವೆ ಮೊದಲಾದವುಗಳು ಕರ್ಮದೊಡನೆ ಸೇರುವವು. ಅವನ್ನು ಆಶ್ರಯಿಸಿರುವ ಉಪಾಸನೆಗಳ ಒಟ್ಟಿಗೆ ಸೇರುವಿಕೆಯನ್ನು ಹೇಳುವ ಒಂದು ವಾಕ್ಯವಾದರೂ ಇಲ್ಲ. ಆದ್ದರಿಂದ ಅವುಗಳನ್ನು ಒಟ್ಟಿಗೆ ಸೇರಿಸಬೇಕೆಂಬ ನಿಯಮವಿಲ್ಲ. ಹಾಗೆ ಸೇರಿಸುವದು ಉಪಾಸಕನ ಇಚ್ಛೆಯನ್ನು ಅವಲಂಬಿಸಿರುವದೆಂದು ಹೇಳಬೇಕು. ೬೫

ಸಿ— 'ಈ ರೀತಿಯಲ್ಲಿ ಉಪಾಸನೆಯನ್ನು ಮಾಡಿರುವ ಬ್ರಹ್ಮನೆಂಬ ಋತ್ವಿಜನು ಯಜ್ಞವನ್ನೂ ಯಜಮಾನನನ್ನೂ ಇತರ ಋತ್ವಿಜರನ್ನೂ ಕಾಪಾಡುತ್ತಾನೆ' ಎಂದು ವಾಕ್ಯವಿದೆಯಷ್ಟೆ. ಮೇಲೆ ಹೇಳಿದ ಉಪಾಸನೆಗಳನ್ನು ಒಟ್ಟಿಗೆ ಸೇರಿಸಬೇಕೆಂಬ ನಿಯಮವಿದ್ದರೆ ಇತರ ಋತ್ವಿಜರೂ ಹಾಗೆ ಉಪಾಸಕರಾಗಬೇಕಾಗಿ ಬಂತು. ಹೀಗಿರುವಾಗ ಎಲ್ಲರೂ ಸಮನಾದಾಗ ಬ್ರಹ್ಮನೆಂಬ ಋತ್ವಿಜನು ಇತರರನ್ನು ರಕ್ಷಿಸುತ್ತಾನೆಂದು ಹೇಗೆ ಹೇಳುವದು? ಆದ್ದರಿಂದ ಆ ಉಪಾಸನೆಗಳನ್ನು ಒಟ್ಟಿಗೆ ಮಾಡಿದರೂ ಮಾಡಬಹುದು; ಬಿಟ್ಟರೂ ಬಿಡಬಹುದು. ಮಾಡುವದೂ ಬಿಡುವದೂ ಉಪಾಸಕನ ಇಷ್ಟ. —೬೬

---

## ಪಾದ ೪

### ನಿರ್ಗುಣವಿದ್ಯೆಯ ಒಳಗಣ ಮತ್ತು ಹೊರಗಣ ಸಾಧನಗಳ ವಿಚಾರ

---

೧ ಬ್ರಹ್ಮವಿದ್ಯೆಯು ಸ್ವತಂತ್ರವಾಗಿ ಮೋಕ್ಷವನ್ನು ಕೊಡುವದು (೧......೧೭)

ಪೂ — "ದೇಹ, ಇಂದ್ರಿಯ-ಮೊದಲಾದವುಗಳಿಗಿಂತ ಬೇರೆಯಾಗಿ ಯಾವಾಗಲೂ ನಿಜವಾಗಿರುವ ಆತ್ಮನ ಜ್ಞಾನವಿಲ್ಲದೆ ಎಂದೋ ಎಲ್ಲಿಯೋ ದೊರೆಯುವ ಸ್ವರ್ಗ ಮೊದಲಾದ ಫಲಕ್ಕಾಗಿ ಬಹಳ ಹಣವನ್ನೂ ವೆಚ್ಚಮಾಡಿ ಬಹಳ ಆಯಾಸವನ್ನೂ ಸಹಿಸುವದಕ್ಕೆ ಜನರಿಗೆ ಮನಸ್ಸು ಬರಲಾರದೆಂದು ದೇಹ ಮೊದಲಾದವುಗಳಿಗಿಂತ ಬೇರೆಯಾದ ಆತ್ಮನ ಜ್ಞಾನವನ್ನು ಜ್ಯೋತಿಷ್ಟೋಮ ಮೊದಲಾದ ಎಲ್ಲ ಕರ್ಮಗಳಿಗೂ ಅಂಗವಾಗಿ ಹೇಳಬೇಕು. ಅಂಗವನ್ನುಳ್ಳದ್ದಕ್ಕಾಗುವ ಫಲವೇ ಅಂಗಕ್ಕೂ ಆಗುವದು.

ಆತ್ಮಜ್ಞಾನವನ್ನು ಅಂಗವಾಗಿ ಉಳ್ಳ ಕರ್ಮಗಳಿಗೆಲ್ಲ ಸ್ವರ್ಗವೇ ಫಲ. ಆದ್ದರಿಂದ ಆತ್ಮಜ್ಞಾನಕ್ಕೂ ಸ್ವರ್ಗವೇ ಫಲವೆಂದೊಪ್ಪಬೇಕು. ಹೀಗೆ ಕರ್ಮಕ್ಕೆ ಅಂಗವಾದ ಆತ್ಮಜ್ಞಾನಕ್ಕೆ ಸ್ವತಂತ್ರವಾಗಿ ಮೋಕ್ಷವನ್ನು ಕೊಡುವ ಸಾಮರ್ಥ್ಯವೆಲ್ಲಿಯದು ?" ಎಂದು ಪೂರ್ವಮೀಮಾಂಸಕರು ಹೇಳುತ್ತಾರಲ್ಲ! ಇದಕ್ಕೆ ನಿಮ್ಮ ಉತ್ತರವೇನು ?

ಸಿ - ಬ್ರಹ್ಮಸಾಕ್ಷಾತ್ಕಾರದಿಂದ ಮೋಕ್ಷ ಉಂಟೆಂದು ಬಾದರಾಯಣರ ಮತ. ಏಕೆಂದರೆ ಆ ಮಾತಿಗೆ ಶ್ರುತಿಯ ಆಧಾರವಿದೆ. —೧

ಪೂ— ದೇಹಕ್ಕಿಂತ ಬೇರೆಯಾದ ಆತ್ಮನ ವಿಷಯವಾದ ಜ್ಞಾನವು ಕರ್ಮಕ್ಕೆ ಅಂಗವಾದ ಮೇಲೆ ಆತ್ಮನೂ ಕರ್ಮಕ್ಕೆ ಅಂಗವಾದಂತೆಯೇ ಆಯಿತು. ಆತ್ಮಜ್ಞಾನದಿಂದ ಮೋಕ್ಷವಾಗುವದೆಂಬುದು ಬರೀ ಹೊಗಳಿಕೆಯ ಮಾತು. ದ್ರವ್ಯದೇವತಾರೂಪವಾದ ಅಂಗಗಳನ್ನೆಲ್ಲ ಹೀಗೆ ಹೊಗಳಿರುವದಕ್ಕೆ ಬೇರೆ ದೃಷ್ಟಾಂತಗಳಿವೆಯೆಂದು ಜೈಮಿನಿ ಋಷಿಗಳ ಅಭಿಪ್ರಾಯ. —೨

,, ಆತ್ಮಸಾಕ್ಷಾತ್ಕಾರವನ್ನು ಹೊಂದಿದ ಜನಕನೇ ಮೊದಲಾದವರೂ ಕರ್ಮಗಳಲ್ಲಿ ತೊಡಗಿರುವದು ಕಂಡುಬಂದಿದೆ. ಆದ್ದರಿಂದ ಆತ್ಮಜ್ಞಾನವು ಕರ್ಮಕ್ಕೆ ಅಂಗವೇ ಹೊರತು ಸ್ವತಂತ್ರವಾಗಿ ಫಲವನ್ನು ಕೊಡುವಂಥದ್ದಲ್ಲ. —೩

,, ಉಪಾಸನೆಯೊಡನೆ ಮಾಡಿದ ಕರ್ಮವು ಹೆಚ್ಚು ಫಲಕಾರಿಯಾಗುವದೆಂದು ಶ್ರುತಿಯೂ ಇರುವದರಿಂದ ಆತ್ಮಜ್ಞಾನವು ಕರ್ಮಕ್ಕೆ ಅಂಗವೆ ಹೊರತು ಸ್ವತಂತ್ರವಾಗಿ ಮೋಕ್ಷವನ್ನು ಕೊಡಲರಿಯದು. —೪

,, ಜೀವನು ಪರಲೋಕಕ್ಕೆ ಹೋಗುವಾಗ ಅವನೊಡನೆ ಅವನ ಉಪಾಸನೆಯೂ ಕರ್ಮವೂ ಹಿಂದಿನ ಜನ್ಮಗಳ ವಿಷಯಭೋಗಗಳ ವಾಸನೆಯೂ ಅವನ ಹಿಂದೆ ಹೋಗುವವೆಂದಿರುವದರಿಂದ ಆತ್ಮಜ್ಞಾನವನ್ನು ಸ್ವತಂತ್ರವಾಗಿ ಮೋಕ್ಷವೆಂಬ ಫಲವನ್ನು ಕೊಡತಕ್ಕದ್ದೆಂದು ಹೇಳಲಾಗುವದಿಲ್ಲ. ಆತ್ಮಜ್ಞಾನವು ಮೋಕ್ಷಕ್ಕೆ ಸಾಧನವಾಗಿದ್ದ ಪಕ್ಷದಲ್ಲಿ ಅದು ಬದುಕಿರುವಾಗಲೆ ಮೋಕ್ಷವನ್ನು ಕೊಡಬಲ್ಲದ್ದಾಗುವದರಿಂದ ಅವನ ಹಿಂದೆ ಹೋಗಬೇಕಾದ ಆಗತ್ಯವಿಲ್ಲ. —೫

ಪೂ— ಆತ್ಮನು ದೇಹ ಮೊದಲಾದವುಗಳಿಗಿಂತ ಬೇರೆಯೆಂಬ ಜ್ಞಾನದಿಂದ ಕೂಡಿದವನು ಮಾಡಿದ ಕರ್ಮಗಳಿಗೆ ಬೇಗ ಫಲವಾಗುವದೆಂದು ಶಾಸ್ತ್ರವು ಹೇಳಿರುವದರಿಂದಲೂ ಆತ್ಮಜ್ಞಾನವು ಕರ್ಮಕ್ಕೆ ಅಂಗವೆ ಹೊರತು ಸ್ವತಂತ್ರವಾಗಿ ಮೋಕ್ಷವನ್ನು ಕೊಡತಕ್ಕದ್ದಲ್ಲ. —೬

,, ಸಾಯುವ ತನಕ ಜ್ಞಾನಿಗಳೂ ಅಜ್ಞಾನಿಗಳೂ ಎಲ್ಲರೂ ಕರ್ಮಗಳನ್ನು ಅಗತ್ಯವಾಗಿ ಮಾಡಲೇ ಬೇಕೆಂದು ಶ್ರುತಿ ಹೇಳುವದರಿಂದ ಆತ್ಮಜ್ಞಾನವು ಸ್ವತಂತ್ರವಾಗಿ ಮೋಕ್ಷವನ್ನು ಕೊಡತಕ್ಕದ್ದಲ್ಲ. ಆತ್ಮಜ್ಞಾನವನ್ನು ಮೋಕ್ಷಕ್ಕೆ ಸಾಧನವೆಂದರೆ ಅದು ಹುಟ್ಟಿದ ಮೇಲೆ ಕರ್ಮವು ವ್ಯರ್ಥವಾಗುವದು. —೭

ಸಿ— ದೇಹ, ಇಂದ್ರಿಯ-ಮೊದಲಾದವುಗಳಿಗಿಂತ ಬೇರೆಯಾದ ಆತ್ಮನು ಬ್ರಹ್ಮಕ್ಕಿಂತ ಬೇರೆಯಲ್ಲವೆಂಬ ಹೆಚ್ಚಿನ ಮಾತಿರುವದರಿಂದ ಆ ಅಭೇದ ಜ್ಞಾನವು ಮೋಕ್ಷಕ್ಕೆ ಸಾಧನವೆಂದು ಬಾದರಾಯಣರ ಮತ. ಆತ್ಮನು ದೇಹ, ಇಂದ್ರಿಯ-ಮೊದಲಾದವುಗಳಿಗಿಂತ ಬೇರೆಯೆಂಬ ಜ್ಞಾನಮಾತ್ರದಿಂದ ಮೋಕ್ಷವಾಗಲಾರದು. ಜೀವನೂ ಬ್ರಹ್ಮನೂ ಬೇರೆಬೇರೆಯಲ್ಲವೆಂಬ ಅಭೇದಜ್ಞಾನವು ಕರ್ಮಕ್ಕೆ ಅಂಗವೆಂದು ಎಲ್ಲಿಯೂ ಹೇಳಿಲ್ಲ. ಆದ್ದರಿಂದ ಅಭೇದಜ್ಞಾನವು ಸ್ವತಂತ್ರವಾಗಿ ಮೋಕ್ಷವೆಂಬ ಫಲವನ್ನು ದೊರಕಿಸುವದೆಂಬ ಮಾತಿಗೆ ಎರಡಿಲ್ಲ. —೮

,, ಜ್ಞಾನಿಯಾಗಿದ್ದ ಜನಕನು ಕರ್ಮವನ್ನು ನಡೆಸುತ್ತಿದ್ದನೆನ್ನುತ್ತಾರಷ್ಟೆ. ಜ್ಞಾನಿಗಳಾದ ಶುಕರೆ ಮೊದಲಾದವರು ಕರ್ಮಗಳನ್ನೆಲ್ಲ ಬಿಟ್ಟು ಸುಮ್ಮನೆ ಇದ್ದ ದೃಷ್ಟಾಂತವೂ ಉಂಟು. ಹೀಗೆ ಎರಡಕ್ಕೂ ದೃಷ್ಟಾಂತಗಳಿದ್ದರೂ ಅನೇಕ ಜ್ಞಾನಿಗಳ ಕರ್ಮವು ಬರೀ ಕುತೂಹಲಕ್ಕಾಗಿಯೋ ಅಥವಾ ಜನರಿಗೆ ಮಾದರಿಯನ್ನು ತೋರಿಸಬೇಕೆಂದೋ ಇರುವದು. ಇಷ್ಟು ಮಾತ್ರದಿಂದ ಜೀವಬ್ರಹ್ಮರ ಅಭೇದಜ್ಞಾನವು ಕರ್ಮಕ್ಕೆ ಅಂಗವಾಗಲಾರದು. —೯

,, ಉಪಾಸನೆಯೊಡನೆ ಮಾಡಿದ ಕರ್ಮವು ಹೆಚ್ಚು ಫಲಕಾರಿಯಾಗುವದೆಂದು ಹೇಳಿರುವ ಮಾತಿನಿಂದ ಜ್ಞಾನವನ್ನು ಕರ್ಮಕ್ಕೆ ಅಂಗವೆಂದ

ರಷ್ಟೆ. ಇಲ್ಲಿ 'ಉಪಾಸನೆ' ಎಂಬ ಮಾತಿನ ಅರ್ಥವು ಬ್ರಹ್ಮಲೋಕವನ್ನು ದೊರಕಿಸಿಕೊಡುವ ದಹರ, ಶಾಂಡಿಲ್ಯ, ವೈಶ್ವಾನರ, ಉಪಕೋಸಲ-ಮೊದಲಾದ ಸಗುಣಬ್ರಹ್ಮೋಪಾಸನೆಗಳೂ ಅಲ್ಲ; ನಿರ್ಗುಣಬ್ರಹ್ಮೋಪಾಸನೆಯೂ ಅಲ್ಲ; ಉದ್ಗೀಥ ಮೊದಲಾದ ಕರ್ಮಾಂಗಗಳನ್ನು ಬ್ರಹ್ಮವಾಗಿ ಕಾಣುವ ಉಪಾಸನೆ. ಕರ್ಮದ ಅಂಗಗಳನ್ನು ಬ್ರಹ್ಮವಾಗಿ ಕಾಣುವ ಉಪಾಸನೆಗಳು ಕರ್ಮಕ್ಕೆ ಅಂಗಗಳೆ ಹೊರತು ಸಗುಣಬ್ರಹ್ಮೋಪಾಸನೆಗಳೂ ಕರ್ಮಕ್ಕೆ ಅಂಗಗಳಲ್ಲ ಮತ್ತು ನಿರ್ಗುಣಬ್ರಹ್ಮವಿದ್ಯೆಯೂ ಕರ್ಮಕ್ಕೆ ಅಂಗವಲ್ಲ. —೧೦

ಸಿ— ಉಪಾಸನೆಯೂ ಕರ್ಮವೂ ಹಿಂದಿನ ಜನ್ಮಗಳ ವಿಷಯಭೋಗಗಳ ವಾಸನೆಗಳೂ ಜೀವನ ಹಿಂದೆ ಪರಲೋಕಕ್ಕೆ ಹೋಗುವವೆಂಬ ಮಾತಿನಿಂದ ಆತ್ಮಜ್ಞಾನವು ಸ್ವತಂತ್ರವಾಗಿ ಮೋಕ್ಷವೆಂಬ ಫಲವನ್ನು ಕೊಡಲಾರದೆಂಬರ್ಥವನ್ನು ತೆಗೆದರಷ್ಟೆ. ಅಲ್ಲಿರುವ ಉಪಾಸನೆಯೆಂಬ ಮಾತಿನಲ್ಲಿ ನಿರ್ಗುಣಬ್ರಹ್ಮವೆಂದಿಗೂ ಅಡಕವಾಗುವದಿಲ್ಲ. ನಿರ್ಗುಣಬ್ರಹ್ಮಜ್ಞಾನಿಗಳು ಇಲ್ಲಿಯೇ ಲಿಂಗಶರೀರವನ್ನು ನೀಗಿಕೊಂಡು ಬ್ರಹ್ಮದೊಡನೆ ಒಂದಾಗುವರೆಂದು ಶ್ರುತಿ ಇವೆ. ಆ ಜ್ಞಾನವು ಪರಲೋಕಕ್ಕೆ ಹೋಗುವ ಸಂಭವವೆ ಇಲ್ಲ. ಅಲ್ಲಿ ಉಪಾಸನೆಯೆಂದರೆ ಸಗುಣಬ್ರಹ್ಮೋಪಾಸನೆಯೆಂದರ್ಥ. ಹೀಗಾದರೆ ಉಪಾಸನೆಯೂ ಕರ್ಮವೂ ಹಿಂದೆ ಹೋಗುವವೆಂಬ ಮಾತಿಗೆ ಅರ್ಥವು ಹೊಂದಿಕೆಯಾಗುತ್ತದೆ. ಹೇಗೆಂದರೆ ಬೆಳಕಿನ ದಾರಿಯಿಂದ ಬ್ರಹ್ಮಲೋಕಕ್ಕೆ ಹೋಗುವ ಸಗುಣೋಪಾಸಕನ ಹಿಂದೆ ಸಗುಣಬ್ರಹ್ಮೋಪಾಸನೆಯು ಹೋಗುತ್ತದೆ. ಕತ್ತಲೆಯ ದಾರಿಯಿಂದ ಸ್ವರ್ಗಕ್ಕೆ ಹೋಗುವ ಕರ್ಮಿಯ ಹಿಂದೆ ಅವನ ಜ್ಯೋತಿಷ್ಟೋಮ ಮೊದಲಾದ ಕರ್ಮವು ಬೆನ್ನುಹತ್ತುತ್ತದೆ. ನೂರು ಹಣವನ್ನು ಬ್ರಾಹ್ಮಣರಿಬ್ಬರಿಗೆ ಕೊಡಬೇಕೆಂದರೆ ಒಬ್ಬೊಬ್ಬರಿಗೆ ಐವತ್ತೈವತ್ತು ಕೊಡಬೇಕೆಂದು ಹೇಳಿದಂತಾಗುತ್ತದೆ. ಇವರಂತೆಯೆ ಸಗುಣಬ್ರಹ್ಮೋಪಾಸನೆಯು ಬ್ರಹ್ಮಲೋಕಪ್ರಾಪ್ತಿಗೆ ಸ್ವತಂತ್ರವಾದ ಸಾಧನ. ಜ್ಯೋತಿಷ್ಟೋಮ ಮೊದಲಾದ ಕರ್ಮಗಳು ಸ್ವರ್ಗಕ್ಕೆ ಸ್ವತಂತ್ರವಾದ ಸಾಧನ. ಆ ಎರಡರ ಸೇರಿಕೆಯು ಯಾವದಕ್ಕೂ ಸಾಧನವಲ್ಲ. ಇನ್ನು ಉಪಾಸನೆಯು ಹಿಂಬಾಲಿ

ಸುವವೆಂಬ ಮಾತಿಗೆ ಸ್ವರ್ಗಕ್ಕೆ ಹೋಗುವ ಕರ್ಮಿಯನ್ನು ಅವನ ಕರ್ಮಕ್ಕೆ ಅಂಗಭೂತವಾಗಿ ಆತ್ಮನು ದೇಹ ಮೊದಲಾದವುಗಳಿಗಿಂತ ಬೇರೆಯೆಂಬ ಜ್ಞಾನವೆಂದೂ ಕರ್ಮವು ಹಿಂಬಾಲಿಸುವದೆಂಬ ಮಾತಿಗೆ ಆ ಕರ್ಮಿಯು ಮಾಡಿದ ಅಗ್ನಿಹೋತ್ರ ಮೊದಲಾದವುಗಳೆಂದೂ ಶ್ರುತಿಯ ಅಭಿಪ್ರಾಯ ವೆನ್ನುವದಾದರೆ ಹಾಗೆಯೇ ಆಗಲಿ. ಆತ್ಮನು ಅಸಂಸಾರಿಯೆಂದು ನಾವು ಹೇಳುವ ಜ್ಞಾನವು ಕರ್ಮಕ್ಕೆ ಅಂಗವಲ್ಲವೆನ್ನುವದೇ ನಮ್ಮ ಆಗ್ರಹ. ಆದ್ದರಿಂದ ಇಂಥ ನೂರಾರು ಶ್ರುತಿಗಳನ್ನು ಉದಾಹರಿಸಿದರೂ ನಮ ಗೇನೂ ಬಾಧಕವಿಲ್ಲ. —೧೧

ಸಿ— ಆತ್ಮನು ದೇಹ ಮೊದಲಾದವುಗಳಿಗಿಂತ ಬೇರೆಯೆಂಬ ಜ್ಞಾನ ದಿಂದ ಕೂಡಿದವನಿಗೆ ಕರ್ಮಗಳನ್ನು ವಿಧಿಸಿರುವದರಿಂದ ಆತ್ಮಜ್ಞಾನವು ಕರ್ಮಾನುಷ್ಠಾನಕ್ಕೆ ಅಂಗವೆಂದರಷ್ಟೆ. ಸಾಂಗವಾಗಿ ವೇದವನ್ನು ಅಧ್ಯ ಯನ ಮಾಡಿ ಕರ್ಮಕಾಂಡದಲ್ಲಿ ಹೇಳಿರುವ ಕರ್ಮಜ್ಞಾನಗಳನ್ನೆಲ್ಲ ತಿಳಿದು ತರ್ಕಶಾಸ್ತ್ರದಂತೆ ಆತ್ಮನನ್ನು ದೇಹ ಮೊದಲಾದವುಗಳಿಗಿಂತ ಬೇರೆ ಯೆಂದು ಮಾತ್ರ ತಿಳಿದವನೆ ಕರ್ಮಕ್ಕೆ ತಕ್ಕವನೆಂದು ಅಲ್ಲಿಯ ಅರ್ಥ ಉಪನಿಷತ್ತುಗಳ ಅಭಿಪ್ರಾಯದಂತೆ ಜೀವನೂ ಬ್ರಹ್ಮವೂ ಒಂದೇ ಎಂದ ರಿತವನಿಗೆ ಅದಲ್ಲ ಜೀವನೂ ಬ್ರಹ್ಮವೂ ಒಂದೇ ಎಂಬ ಜ್ಞಾನವು ಕರ್ಮಾನುಷ್ಠಾನಕ್ಕೆ ಉಪಯೋಗವಾಗುವದಿಲ್ಲ. —೧೨

,, ಜ್ಞಾನಿಗಳೂ ಅಜ್ಞಾನಿಗಳೂ ಎಲ್ಲರೂ ಸಾಯುವ ತನಕ ಕರ್ಮ ಗಳನ್ನು ಅಗತ್ಯವಾಗಿ ಮಾಡಬೇಕೆಂದು ಶ್ರುತಿ ಹೇಳುವದರಿಂದ ಬ್ರಹ್ಮ ಜ್ಞಾನವು ಸ್ವತಂತ್ರವಾಗಿ ಮೋಕ್ಷವೆಂಬ ಫಲವನ್ನು ಕೊಡಲಾರದೆಂದ ರಷ್ಟೆ. ಸಾಯುವ ತನಕ ಕರ್ಮಗಳನ್ನು ಮಾಡಬೇಕೆಂಬುದು ಜೀವನೂ ಬ್ರಹ್ಮವೂ ಒಂದೇ ಎಂಬ ಅರಿವಿಲ್ಲದೆ ದೇಹ ಮೊದಲಾದವುಗಳೆ ತಾ ನೆಂಬ ಅಭಿಮಾನದಿಂದ ತೊಳಲುವ ಅಜ್ಞಾನಿಗಳಿಗೆ ಹೇಳಿದ ಸರ್ವಸಾ ಮಾನ್ಯವಾದ ಮಾತು. ಜ್ಞಾನಿಗಳಿಗೆ ಜ್ಞಾನವು ಹುಟ್ಟಿದೊಡನೆ ಮೋಕ್ಷ ವಾಗುವದೆಂದು ಅನೇಕ ಶ್ರುತಿಗಳು ಹೇಳುವದರಿಂದ ಜ್ಞಾನವಾದ ಮೇಲೆ ಕರ್ಮವು ವ್ಯರ್ಥವಾದ್ದರಿಂದ ಸಾಯುವ ತನಕ ಕರ್ಮದಲ್ಲಿಯೇ ಹೆಣಗಬೇ

ಕೆನ್ನುವದು ಅಜ್ಞಾನಿಗಳಿಗೆ ಹೇಳಿದ ಮಾತೆನ್ನುವದೇ ಸರಿ. ಬ್ರಹ್ಮಜ್ಞಾನವಿಲ್ಲದೆ ಕರ್ಮಗಳನ್ನು ಬಿಟ್ಟವರು ಪಾಪಿಗಳೆಂದು ಸ್ಮೃತಿಯು ಹೇಳುತ್ತದೆ. —೧೩

೩— ಸಾಯುವ ತನಕ ಕರ್ಮಗಳನ್ನು ಮಾಡಬೇಕೆಂಬ ಮಾತು ಜ್ಞಾನಿಗಳಿಗೇ ಹೇಳಿದ್ದೆಂಬ ಹಠವನ್ನು ಹಿಡಿದರೂ ಅದಕ್ಕೆ ಬೇರೆ ಪರಿಹಾರವಿದೆ. ಅದೇನೆಂದರೆ ಜ್ಞಾನಿಗಳಿಗೆ ಕೂಡ ಸಾಯುವ ತನಕ ಕರ್ಮವು ಅಗತ್ಯವೆಂದು ಹೇಳಿದ ಮೇಲೆ ಅಜ್ಞಾನಿಗಳಿಗೆ ಹೇಳತಕ್ಕದ್ದನ್ನೇನೆಂದು ಆ ವಾಕ್ಯವು ಕರ್ಮಾನುಷ್ಠಾನವನ್ನು ಅಗತ್ಯವೆಂದು ಮಾತ್ರ ಹೇಳಿದಂತಾಗುವದು —೧೪

,, ಇನ್ನೊಂದು ಪರಿಹಾರವೂ ಇದೆ. ಒಂದು ಶಾಖೆಯವರು 'ಈ ಆತ್ಮನ ಅರಿವಿಲ್ಲದೆ ನಾವಿನ್ನೇಕೆ ಯಜ್ಞವನ್ನು ಮಾಡೋಣ; ಮಕ್ಕಳನ್ನು ಕಟ್ಟಿಕೊಂಡೇನು ಪ್ರಯೋಜನ?' ಎಂದು ಹೇಳುವದನ್ನು ನೋಡಿದರೆ ಬ್ರಹ್ಮಜ್ಞಾನಿಗಳು ಕರ್ಮಗಳನ್ನೆಲ್ಲ ಬಿಟ್ಟು ಹಾಯಾಗಿ ಸುಮ್ಮನಿರಬೇಕೆಂದು ತೋರುತ್ತದೆ. ಆದ್ದರಿಂದ ಯಾವಾಗಲೂ ಕರ್ಮಗಳನ್ನು ಮಾಡುತ್ತಿರಬೇಕೆಂಬ ವಾಕ್ಯವು ಅಜ್ಞಾನಿಗಳಿಗೆ ಹೇಳಿದ್ದೊ ಅಥವಾ ಕರ್ಮವನ್ನು ಹೊಗಳುವದಕ್ಕೆ ಹೇಳಿದ್ದೊ ಆಗಬೇಕಾಗುತ್ತದೆ. —೧೫

,, ಜೀವನೂ ಬ್ರಹ್ಮವೂ ಒಂದೇ ಎಂಬ ಜ್ಞಾನವು ಕರ್ಮಗಳನ್ನೆಲ್ಲ ಸುಟ್ಟು ಬೂದಿ ಮಾಡುತ್ತದೆ. ಆದ್ದರಿಂದಲೂ ಅದು ಕರ್ಮಕ್ಕೆ ಅಂಗವಲ್ಲ. ಜೀವನೂ ಬ್ರಹ್ಮವೂ ಒಂದೆ ಎಂಬ ಅರಿವು ಹುಟ್ಟಿದೊಡನೆ ಜೀವನು ತಾನು ಮಾಡುವವನೆಂಬ ಮತ್ತು ಅನುಭವಿಸುವವನೆಂಬ ಮುಂತಾದ ಧರ್ಮಗಳೂ ಅಗ್ನಿಹೋತ್ರ ಮೊದಲಾದ ಕರ್ಮಗಳೂ ಅನುಭವಿಸುವ ಸ್ವರ್ಗ ಮೊದಲಾದ ಫಲಗಳೂ ಸುಳ್ಳಾದವುಗಳೆಂದು ಗೊತ್ತಾಗಿಬಿಡುತ್ತದೆ. ಇಷ್ಟೇ ಅಲ್ಲದೆ ಈಶ್ವರನ ಸರ್ವಜ್ಞತ್ವ, ಸರ್ವೇಶ್ವರತ್ವ–ಮೊದಲಾದ ಧರ್ಮಗಳೂ ಹಾರಿಹೋಗುತ್ತವೆ. ಜೀವನೂ–ಬ್ರಹ್ಮವೂ ಒಂದೆ ಎಂಬ ಅರಿವಿನ ಸಾಕ್ಷಾತ್ಕಾರವಾಗದಿದ್ದರೂ ಕೇಳಿಕೆಯ ಮಾತ್ರದಿಂದಲೆ ಅದು ಕರ್ಮಾನುಷ್ಠಾನಕ್ಕೆ ಹಗೆಯಾಗುವದು. ಆದ್ದರಿಂದ ಅದು ಕರ್ಮಾನುಷ್ಠಾನಕ್ಕೆ ಅಂಗವಾಗಲಾರದು. —೧೬

ಸಿ— ಶ್ರುತಿಯಲ್ಲಿ ಬ್ರಹ್ಮವಿದ್ಯೆಯನ್ನು ಕೇಳಿ ತಿಳಿದುಕೊಳ್ಳುವದಕ್ಕೆ ಸಂನ್ಯಾಸಿಗಳೇ ತಕ್ಕವರೆಂದಿದೆ. ಸಂನ್ಯಾಸಿಗಳಿಗೆ ಕರ್ಮಾನುಷ್ಠಾನವಿರುವ ಸಂಭವವಿಲ್ಲ. ಸಂನ್ಯಾಸಿಗಳಿಗೆ ತಕ್ಕ ಬ್ರಹ್ಮಜ್ಞಾನವು ಕರ್ಮಾನುಷ್ಠಾನಕ್ಕೆ ಅಂಗವಾಗಲಾರದು. —೧೭

೨ ಸಂನ್ಯಾಸವು ಕೈಗೊಳ್ಳತಕ್ಕದ್ದು (೧೮...೨೦)

ಪೂ— ಸಂನ್ಯಾಸಾಶ್ರಮವು ಉಂಟೆಂದು ಹೇಳಿದಿರಷ್ಟೆ. ಅದು ಉಚಿತವಲ್ಲ. 'ಮೂರು ಧರ್ಮದ ಕೊಂಬೆಗಳು' ಎಂಬ ಮುಂತಾದ ವಾಕ್ಯಗಳಲ್ಲಿರತಕ್ಕ ತಪಸ್ಸೆಂಬ ಮಾತಿನಿಂದ ಸಂನ್ಯಾಸಾಶ್ರಮವು ತೋರುವದೇನೋ ನಿಜ; ಆದರೆ ಅದು ಅಲ್ಲಿ ವಿಧಿಸಲ್ಪಡುವದಿಲ್ಲ. ಅದರ ಜೊತೆಯಲ್ಲಿಯೇ ಹೇಳಿರುವ ಬ್ರಹ್ಮಚರ್ಯವೇ ಮೊದಲಾದ ಮೂರು ಆಶ್ರಮಗಳನ್ನು ಸ್ಪಷ್ಟವಾಗಿ ವಿಧಿಸುವ ಬೇರೆ ವಾಕ್ಯಗಳಿರುವದರಿಂದ ಅವುಗಳು ನಾವು ಮಾಡತಕ್ಕವುಗಳಾಗುವವು. ಸಂನ್ಯಾಸನಾದರೋ 'ಬ್ರಹ್ಮದಲ್ಲಿಯೇ ನಟ್ಟ ಮನಸ್ಸಿನವನು ಮೋಕ್ಷವನ್ನು ಪಡೆಯುತ್ತಾನೆ' ಎಂಬ ವಾಕ್ಯದಲ್ಲಿ ಹೇಳಿರುವ ಬ್ರಾಹ್ಮೀಸ್ಥಿತಿಯನ್ನು ಹೊಗಳುವದಕ್ಕೆ ಮಾತ್ರ ಹೊರಟದಾಗಿದೆ. ಆಚಾರದಲ್ಲಿಯೂ ಸ್ಮೃತಿಯಲ್ಲಿಯೂ ಇರುವ ಸಂನ್ಯಾಸಾಶ್ರಮವನ್ನು ಇಲ್ಲಿ ಅನುವಾದ ಮಾಡಿದರೂ 'ಅಗ್ನಿಯನ್ನು ಉದ್ವಾಸನೆಮಾಡಿದವನು ವೀರನನ್ನು ಕೊಂದವನಾಗುತ್ತಾನೆ' ಎಂಬ ಮುಂತಾದ ವಾಕ್ಯಗಳಲ್ಲಿ ಸಂನ್ಯಾಸವು ನಿಂದಿಸಲ್ಪಟ್ಟಿರುವದರಿಂದ ಕರ್ಮಕ್ಕೆ ಅನಧಿಕಾರಿಗಳಾದ ಕುರುಡ, ಕುಂಟ–ಮೊದಲಾದ ಅಂಗಹೀನರೇ ಸಂನ್ಯಾಸವನ್ನು ಕೈಗೊಳ್ಳಬೇಕೆಂದು ತಿಳಿಯಬೇಕು. —೧೮

ಸಿ— ಹಾಗಲ್ಲ. ಬ್ರಹ್ಮಚರ್ಯವೇ ಮೊದಲಾದ ಆಶ್ರಮಗಳ ಜೊತೆಯಲ್ಲಿಯೇ ಹೇಳಿರುವ ಸಂನ್ಯಾಸವು ಉಳಿದ ಆಶ್ರಮಗಳಂತೆಯೇ ನಮಗೆ ಅನುಷ್ಠೇಯವಾದದ್ದು. ಬೇರೆ ಶ್ರುತಿಗಳಲ್ಲಿ ಸ್ಪಷ್ಟವಾಗಿ ವಿಧಿಸಿರುವ ಬ್ರಹ್ಮಚರ್ಯ ಮೊದಲಾದ ಆಶ್ರಮಗಳೇ ಮೇಲೆ ಹೇಳಿದ ವಾಕ್ಯದಲ್ಲಿ ಅನುವಾದ ಮಾಡಿದ್ದಾಗಿರುವಂತೆ ಬೇರೆ ಶ್ರುತಿಯಲ್ಲಿ ಸ್ಪಷ್ಟವಾಗಿ ವಿಧಿಸಿರುವ ಸಂನ್ಯಾಸಾಶ್ರಮವೇ ಇಲ್ಲಿ ಅನುವಾದರೂಪದಲ್ಲಿದೆ. ಸಂನ್ಯಾಸಾಶ್ರಮದಲ್ಲಿಯೇ

ತಪಸ್ಸು ಚೆನ್ನಾಗಿ ನಡೆಯುವವರಿಂದ ತಪಸ್ಸೆಂಬ ಪದದಿಂದ ಸಂನ್ಯಾಸಾಶ್ರಮವನ್ನು ತೆಗೆದುಕೊಳ್ಳುವದಕ್ಕೆ ಸಂದೇಹವಿಲ್ಲ. —೧೯

ಸಿ— ಅಥವಾ ಮೇಲೆ ಹೇಳಿದ ಶ್ರುತಿಯು ಸಂನ್ಯಾಸಾಶ್ರಮನ್ನು ಅನುವಾದ ಮಾಡಿರುವದೆಂದು ಮಾತ್ರ ತಿಳಿಯಬಾರದು; ಸಂನ್ಯಾಸವನ್ನು ವಿಧಿಸುತ್ತದೆಂದೇ ಹೇಳಬೇಕು. ಪಿತ್ರ್ಯದಲ್ಲಿ 'ಆ ಹವಿಸ್ಸಿನ ಕೆಳಗೆ ಸಮಿತ್ತನ್ನಿಟ್ಟುಕೊಂಡು ಹೋಗಬೇಕು' ಎಂಬ ವಾಕ್ಯದಲ್ಲಿ ವಿಧಿಸಿರುವ ಅಧೋಧಾರಣವನ್ನು ಹೊಗಳುವದಕ್ಕೆ 'ದೇವತೆಗಳಿಗೆ ಮಾತ್ರ ಉಪರಿಧಾರಣ' ಎಂಬ ವಾಕ್ಯವು ಹೊರಟಿದೆ. ಅಲ್ಲಿ ಉಪರಿಧಾರಣವು ಹೊಸದಾದ ವಿಷಯವಾದ್ದರಿಂದ ಅಲ್ಲಿಯೂ ವಿಧಿಯನ್ನು ಒಪ್ಪಬೇಕಾಗುವದು. ಅದರಂತೆಯೆ ಸಂನ್ಯಾಸಾಶ್ರಮವೂ ಇತರ ಪ್ರಮಾಣಗಳಿಂದ ತಿಳಿಯಬರುವದಿಲ್ಲವಾದ್ದರಿಂದ ತಪಸ್ಸೆಂಬ ಮಾತಿನಿಂದ ಕೂಡಿದ ಮೇಲೆ ಹೇಳಿದ ವಾಕ್ಯದಿಂದ ವಿಧಿಸಲ್ಪಡುತ್ತದೆಂದೇ ಒಪ್ಪಬೇಕು --೨೦

೩ ಉದ್ಗೀಥವು ರಸತಮವೆಂದು ಹೇಳಿದ್ದು ಉಪಾಸನೆಗಾಗಿ (೨೧...೨೨)

ಪೂ— 'ಉದ್ಗೀಥವು ಎಲ್ಲ ರಸಗಳಿಗೂ ಉತ್ಕೃಷ್ಟವಾದ ರಸತಮವಾದದ್ದು' ಎಂದು ಮುಂತಾಗಿ ವಾಕ್ಯಗಳಿವೆಯಷ್ಟೆ. ಅವನ್ನು ನೋಡಿದರೆ ಕರ್ಮಕ್ಕೆ ಅಂಗವಾದ ಉದ್ಗೀಥ ಮೊದಲಾದವುಗಳನ್ನು ಸ್ತುತಿಸುವಂತೆ ಮಾತ್ರ ಕಾಣುವದಲ್ಲ!

ಸಿ— ಆ ವಾಕ್ಯಕ್ಕೆ 'ಸ್ತುತಿಮಾತ್ರವನ್ನು ಪ್ರಯೋಜನವಾಗಿ ಹೇಳಿದರೆ ವಾಕ್ಯವು ವ್ಯರ್ಥವಾದೀತು ಅದು ವಿಧಿಸುವದೆಂದರೆ ಮಾತ್ರ ಸಫಲವಾಗುವದು. ಹಿಂದೆ ಸಿದ್ಧಾಂತವಾಡಿದಂತೆಯೇ ರಸತಮತ್ವವೆಂಬ ಗುಣದಿಂದ ಕೂಡಿದ ಉದ್ಗೀಥದ ಉಪಾಸನೆಯು ಬೇರೆ ಪ್ರಮಾಣಗಳಿಗೆ ಅಗೋಚರವಾಗಿರುವದರಿಂದ ವಿಧಿಸಲ್ಪಡುವದೆಂದೇ ಹೇಳಬೇಕು —೨೧

.. ಇಷ್ಟೇ ಅಲ್ಲ. 'ಉದ್ಗೀಥವನ್ನು ಉಪಾಸನೆ ಮಾಡು' ಎಂದು ವಿಧಿಸುವ ಪದಗಳು ಸ್ಪಷ್ಟವಾಗಿಯೇ ಇರುವದರಿಂದ ಉದ್ಗೀಥವು ರಸತಮವಾದದ್ದೆಂಬ ಮುಂತಾದ ವಾಕ್ಯಗಳು ಉದ್ಗೀಥೋಪಾಸನೆಯನ್ನು ವಿಧಿಸುವದಕ್ಕೆ ಹೊರಟಿವೆಯೇ ಹೊರತು ಸ್ತುತಿಮಾತ್ರಕ್ಕಲ್ಲವೆಂದೇ ತಿಳಿಯಬೇಕು —೨೨

೪ ಉಪನಿಷತ್ತಿನಲ್ಲಿರುವ ಉಪಾಖ್ಯಾನಗಳು ಕರ್ಮಕ್ಕೆ ಅಂಗಗಳಲ್ಲ (೨೩ .. ೪)

ಪೂ — ಅಶ್ವಮೇಧಕ್ಕೆ ಅಂಗವಾಗಿ ಪಾರಿಪ್ಲವವೆಂಬ ಒಂದು ಕರ್ಮ ಉಂಟು. ಅದರಲ್ಲಿ ಜ್ಯೋತಿಷ್ಟೋಮ ಮೊದಲಾದ ಎಲ್ಲ ಕರ್ಮಗಳ ಅಂಗಭೂತವಾದ ಮಂತ್ರಗಳನ್ನು ಹೇಳಬೇಕೆಂದು ನಿಯಮವಿದೆ. ಉಪನಿಷತ್ತುಗಳ ನಡುವೆ ಇರುವ ಯಾಜ್ಞವಲ್ಕ್ಯಮೈತ್ರೇಯೀಸಂವಾದ ಮೊದಲಾದ ಕಥಾಪ್ರಬಂಧಗಳು ಕೂಡ ಪಾರಿಪ್ಲವಕ್ಕಾಗಿ ಎಂದು ತಿಳಿಯಬೇಕು.
— ೨೩

ಸಿ— ಹಾಗಲ್ಲ. ಎಲ್ಲ ಕರ್ಮಗಳ ಅಂಗಭೂತವಾದ ಮಂತ್ರಗಳನ್ನೂ ಪಾರಿಪ್ಲವದಲ್ಲಿ ಹೇಳಬೇಕೆಂದು ಹೇಳಿರುವ ಮಾತಿದೆ. ಜ್ಞಾನಕಾಂಡದಲ್ಲಿರುವ ಉಪಾಖ್ಯಾನಗಳು ಕರ್ಮಕಾಂಡದ ಪಾರಿಪ್ಲವಕ್ಕೆ ಅಂಗವಾಗುವ ಸಂಭವವಿಲ್ಲ. – ೨೩

,, ಉಪಾಖ್ಯಾನಗಳು ಪಾರಿಪ್ಲವಕ್ಕೆ ಅಂಗವಾಗದಿದ್ದರೂ ಬ್ರಹ್ಮವಿದ್ಯೆಯ ಪ್ರಕರಣಗಳಲ್ಲಿ ಬಂದಿರುವವುಗಳಾದ್ದರಿಂದ ಬ್ರಹ್ಮವಿದ್ಯೆಗೆ ಅಂಗವಾದವುಗಳು. ಉಪಾಖ್ಯಾನಗಳ ಮೂಲಕ ಬ್ರಹ್ಮವನ್ನು ತಿಳಿಸಿದರೆ ಮಂದಬುದ್ಧಿಗಳಿಗೆ ಕೂಡ ಅದು ಸುಲಭವಾಗಿ ತಿಳಿಯಬಹುದೆಂದು ಅವು ಅದಕ್ಕಾಗಿ ಹೇಳಿರತಕ್ಕವುಗಳು – ೨೪

೫ ಬ್ರಹ್ಮಸಾಕ್ಷಾತ್ಕಾರಕ್ಕೆ ಅಗ್ನಿಹೋತ್ರ ಮೊದಲಾದವುಗಳ ಅಪೇಕ್ಷೆ ಇಲ್ಲ (೨೫)

,, ಬ್ರಹ್ಮವಿದ್ಯೆಯು ಸಂನ್ಯಾಸಿಗಳಿಗೆ ಹೇಳತಕ್ಕ ಮಾತಾದ್ದರಿಂದ ಬ್ರಹ್ಮಸಾಕ್ಷಾತ್ಕಾರಕ್ಕೆ ಅಗ್ನಿಹೋತ್ರ ಮೊದಲಾದ ಕರ್ಮಗಳ ಅಪೇಕ್ಷೆಯೇನೂ ಇಲ್ಲ. --೨೫

೬ ಬ್ರಹ್ಮಸಾಕ್ಷಾತ್ಕಾರಕ್ಕೆ ಕರ್ಮಗಳು ಹೊರಗಣ ಸಾಧನ; ಮನೋನಿಗ್ರಹ ಮೊದಲಾದವು ಒಳಗಣ ಸಾಧನ (೨೬ . ೩೨)

ಪೂ – ಬ್ರಾಹ್ಮಣರು ಯಜ್ಞದಿಂದಲೂ ದಾನದಿಂದಲೂ ತಪಸ್ಸಿನಿಂದಲೂ ಬ್ರಹ್ಮವನ್ನು ತಿಳಿಯಲಿಚ್ಛಿಸುವರೆಂದು ಶ್ರುತಿ ಇದೆಯಲ್ಲ! ಹೀಗೆ ಯಜ್ಞ ಮೊದಲಾದವುಗಳು ಬ್ರಹ್ಮಸಾಕ್ಷಾತ್ಕಾರಕ್ಕೆ ಸಾಧನವಾಗಿರುವಾಗ ಅವುಗಳನ್ನು ಕೆಲಸಕ್ಕೆ ಬಾರದವುಗಳೆಂದು ಹೀಗಳೆಯುವುದು ತಪ್ಪಲ್ಲವೆ? ಬರದವುಗಳೆಂದು ಹಿಂದಕ್ಕೆ ತಳ್ಳಬಹುದೆ?

ಸಿ— ಬ್ರಹ್ಮಸಾಕ್ಷಾತ್ಕಾರಕ್ಕೆ ಎಲ್ಲ ಕರ್ಮಗಳೂ ಪರಂಪರೆಯಿಂದ ಸಾಧನಗಳೆ ಕುದುರೆಯು ತೆಜ್ಜೆಯನ್ನು ಮುಂದಕ್ಕೆ ಹಾಕುವದರ ಮೂಲಕ ಮುಂದಿನ ಊರನ್ನು ಸೇರುವದಕ್ಕೆ ಸಾಧನವಾದಂತೆ ಕರ್ಮಗಳಿಂದ ಚಿತ್ತಶುದ್ಧಿ, ಅದರಿಂದ ವೈರಾಗ್ಯ, ಅದರಿಂದ ಸಂನ್ಯಾಸ, ಅದರಿಂದ ಬ್ರಹ್ಮವನ್ನು ಕೇಳುವದು, ತಿಳಿಯುವದು, ಚಿಂತಿಸುವದು– ಈ ಪರಂಪರೆಯಿಂದ ಯಜ್ಞ ಮೊದಲಾದವುಗಳೂ ಬ್ರಹ್ಮಸಾಕ್ಷಾತ್ಕಾರಕ್ಕೆ ಸಾಧಕವಾದವುಗಳೆ. —೨೬

,, ಸಂನ್ಯಾಸಿಯು ಬ್ರಹ್ಮಸಾಕ್ಷಾತ್ಕಾರಕ್ಕಾಗಿ ಕರ್ಮಗಳನ್ನು ಮಾಡದೆ ಹೋದರೂ ಮನೋನಿಗ್ರಹವನ್ನೂ ಇಂದ್ರಿಯನಿಗ್ರಹವನ್ನೂ ಮಾಡಬೇಕು. ಇವು ಬ್ರಹ್ಮಸಾಕ್ಷಾತ್ಕಾರಕ್ಕೆ ಸಾಕ್ಷಾತ್ಸಾಧನಗಳು. ಇವು ಅವನಿಗೆ ಬಹು ಅವಶ್ಯಕ. —೨೭

### ೭ ಸಂನ್ಯಾಸಿಯು ನಾಲ್ಕು ವರ್ಣದವರಲ್ಲಿಯೂ ಉಣ್ಣಬಹುದೆಂಬುದು ಆಪತ್ಕಾಲದ ವಿಷಯ (೨೮...೩೧)

ಪೂ— ಸಂನ್ಯಾಸಿಯು ನೀಚರನ್ನು ಬಿಟ್ಟು ಎಲ್ಲ ವರ್ಣದವರಲ್ಲಿಯೂ ಭಿಕ್ಷೆಯನ್ನು ಮಾಡಬಹುದೆಂದು ಶಾಸ್ತ್ರವು ಹೇಳುತ್ತದೆ. ಇದು ಅವರಿಗೆ ಯೋಗ್ಯವೆ ?

ಸಿ— ಹಾಗೆ ಮಾಡಬಹುದೆಂಬುದು ಪ್ರಾಣವೇ ಹೋಗುವಂಥ ಸಂಕಟದ ಸಮಯಕ್ಕೆ ಹೇಳಿದ ಮಾತು. —೨೮

,, ಆದ್ದರಿಂದ ಕೆಲವು ಪದಾರ್ಥಗಳನ್ನು ತಿನ್ನಬಾರದೆಂಬ ಶ್ರುತಿಗೆ ಇದರಿಂದ ಏನೂ ಬಾಧಕವಿಲ್ಲ. —೨೯

,, ಸ್ಮೃತಿಗಳಲ್ಲಿ ಕೂಡ ತಿನ್ನಬಹುದಾದ ಮತ್ತು ತಿನ್ನಬಾರದಾದ ಪದಾರ್ಥಗಳ ವಿಭಾಗವಿದೆ. —೩೦

,, ಆದ್ದರಿಂದಲೆ ಉಷಸ್ತಿಯು ಒಂದು ಸಲ ಒಂಟೆಯವನು ತಿಂದ್ದು ಮಿಕ್ಕ ಗುಗ್ಗರಿಯನ್ನು ತಿಂದು ನೀರನ್ನು ಅವನು ಕುಡಿದು ಮಿಕ್ಕದ್ದೆಂದು ಕುಡಿಯದೆ ಹೋದನು. ಕಾರಣವನ್ನು ಕೇಳಿದಾಗ ಗುಗ್ಗರಿಯನ್ನು ತಿನ್ನದೆ ಇದ್ದರೆ ಸಾಯುತ್ತಿದ್ದೆನೆಂದೂ ನೀರು ಬೇರೆ ಕಡೆ ದೊರೆಯುವದೆಂದೂ ಅವನು ಉತ್ತರವನ್ನು ಕೊಟ್ಟನು. ಹಾಗೆ ಸಾಯುವ ಸಂಕಟ ಬಂದಾಗ

ಉಷಸ್ತಿಯು ತಿನ್ನಬಾರದ್ದನ್ನು ತಿಂದನು. ಹಾಗೆಯೆ ಸಂನ್ಯಾಸಿಯು ಆಪತ್ಕಾಲದಲ್ಲಿ ನಾಲ್ಕು ವರ್ಣದವರಲ್ಲಿಯೂ ಉಣ್ಣಬಹುದು. ಇದರ ಮೇಲೆ ಸಂನ್ಯಾಸಿಯು ನಾಲ್ಕು ವರ್ಣದವರಲ್ಲಿಯೂ ಉಣ್ಣಬಹುದೆಂಬ ಮಾತು ಹಿಂದಿನ ಯುಗಗಳಿಗೆ ಸಂಬಂಧಪಟ್ಟದ್ದು. ಇದು ಕಲಿಯುಗ. ಈಗ ಆ ಮಾತಿನ ಬಳಕೆ ಇಲ್ಲ. —೩೧

೮ ಸಂನ್ಯಾಸಿಗಳು ತಮ್ಮ ಆಶ್ರಮಧರ್ಮಗಳನ್ನು ಮಾಡಬೇಕು (೩೨ .. ೩೫)

ಸಿ— ಸ್ನಾನ, ಶೌಚ, ಭಿಕ್ಷಾಟನ–ಮೊದಲಾದ ಯೋಗದ ಸಾಧನಗಳನ್ನೂ ಸಂನ್ಯಾಸಿಗಳು ಮಾಡಬೇಕು. ಇವೆಲ್ಲ ಅವರಿಗೆ ಆಶ್ರಮಧರ್ಮಗಳೆಂದು ಗೊತ್ತಾಗಿದೆ. —೩೨

,, ಆಶ್ರಮಧರ್ಮಗಳು ಚಿತ್ತಶುದ್ಧಿಯನ್ನುಂಟುಮಾಡುವುದರಮೂಲಕ ಬ್ರಹ್ಮಸಾಕ್ಷಾತ್ಕಾರಕ್ಕೆ ನೆರವಾಗುವವು. —೩೩

,, ಯಾವ ಶ್ರುತಿಯನ್ನು ನೋಡಿದರೂ ಸ್ಮೃತಿಯನ್ನು ನೋಡಿದರೂ ಸಂನ್ಯಾಸಿಗಳೆ ಬ್ರಹ್ಮವಿದ್ಯೆಗೆ ತಕ್ಕವರು —೩೪

,, ಮಾನಾಪಮಾನಗಳನ್ನು ತೊರೆದಿರುವುದು ಬ್ರಹ್ಮಸಾಕ್ಷಾತ್ಕಾರಕ್ಕೆ ಸಾಧನವೆಂಬಿದೆ. ಅದು ಬಹುಮಟ್ಟಿಗೆ ಸಂನ್ಯಾಸಿಗಳಿಗೆ ಮಾತ್ರ ಸಾಧ್ಯ; ಹೆಂಡತಿಮಕ್ಕಳ ಮೇಲಿನ ಅಭಿಮಾನವುಳ್ಳ ಗೃಹಸ್ಥರಿಗೆ ಅದು ಸಾಧ್ಯವಲ್ಲ. ಅದರಿಂದ ಸಂನ್ಯಾಸಿಗಳೆ ಬ್ರಹ್ಮವಿದ್ಯೆಗೆ ತಕ್ಕವರು. —೩೫

೯ ಹೆಂಡತಿ ಇಲ್ಲದವನೂ ಬ್ರಹ್ಮವಿದ್ಯೆಗೆ ತಕ್ಕವನೆ (೩೬ .. ೩೯)

,, ದೈವಯೋಗದಿಂದ ಹೆಂಡತಿ ಸತ್ತುಹೋದರೆ ಅವರು ಆಗ ಯಾವ ಆಶ್ರಮವೂ ಇಲ್ಲದವರಾಗಿ ಗೃಹಸ್ಥರೂ ಅಲ್ಲದೆ ಸಂನ್ಯಾಸಿಯೂ ಅಲ್ಲದೆ ನಡುವಣವರಾಗಿರುತ್ತಾರೆ. ಅವರು ಕೂಡ ಬ್ರಹ್ಮವಿದ್ಯೆಗೆ ತಕ್ಕವರೆ. ಅಗ್ನಿಹೋತ್ರ ಮೊದಲಾದ ಕರ್ಮಗಳಿಲ್ಲದ್ದರಿಂದ ಅವರ ಮನಸ್ಸು ಹೊರಗೆ ಹರಿದಾಡುವುದು ಕಡಿಮೆ. ಅವರಿಗೆ ಬ್ರಹ್ಮಚರ್ಯದ ನಿಯಮವೂ ಇರುತ್ತದೆ. ಇಂಥ ಬಹುಜನಕ್ಕೆ ಬ್ರಹ್ಮಸಾಕ್ಷಾತ್ಕಾರವಾದದ್ದು ಕಂಡುಬಂದಿದೆ —೩೬

ಸಿ— ಅಂಥ ಬಹು ಜನಕ್ಕೆ ಬ್ರಹ್ಮಸಾಕ್ಷಾತ್ಕಾರವಾಗಿರುವದೆಂದು ಮನುಸ್ಮೃತಿ ಮೊದಲಾದವುಗಳಲ್ಲಿ ಹೇಳಿದೆ. --೩೭

,, ಅವರಿಗೆ ಜ್ಞಾನವು ಹುಟ್ಟುವವಕ್ಕೆ ಸಾಧನವಾದ ಕರ್ಮವಿಲ್ಲದಿದ್ದರೂ ಅವರು ಮಾಡುವ ಸ್ನಾನ, ಸಂಧ್ಯಾ, ಜಪ, ತಪ-ಇವೆ ಅವರಿಗೆ ಜ್ಞಾನವನ್ನುಂಟುಮಾಡುತ್ತವೆ. —೩೮

,, ಯಾವ ಆಶ್ರಮವೂ ಇಲ್ಲದವರು ಮಾಡುವ ಕರ್ಮಕ್ಕಿಂತ ಆಶ್ರಮ ಉಳ್ಳವರು ಮಾಡುವ ಕರ್ಮಕ್ಕೆ ಬೆಲೆ ಹೆಚ್ಚು. ಅವರದು ತಡವಿಲ್ಲದೆ ಜ್ಞಾನವನ್ನುಂಟುಮಾಡಿಕೊಡುತ್ತವೆ. —೩೯

೧೦ ಸಂನ್ಯಾಸಿಯು ಮತ್ತೆ ಗೃಹಸ್ಥನಾಗಕೂಡದು (೪೦)

,, ಸಂನ್ಯಾಸಾಶ್ರಮವನ್ನು ತೆಗೆದುಕೊಂಡು ಅಲ್ಲಿಂದ ಹಿಂದಿರುಗುವದು ಶಾಸ್ತ್ರಕ್ಕೆ ಎಷ್ಟು ಮಾತ್ರವೂ ಒಪ್ಪಲ್ಲ. ಅವರು ಸಾಯುವ ತನಕ ಸಂನ್ಯಾಸಾಶ್ರಮದಲ್ಲಿಯೇ ಇರಬೇಕು. ಅವರು ಹಿಂದಿರುಗಕೂಡದೆಂದು ಮನು ಮೊದಲಾದವರು ಗೊತ್ತುಮಾಡಿದ್ದಾರೆ. ಅವರಿಗೆ ಸಂನ್ಯಾಸವು ಬೇಡವೆನಿಸಿದರೆ ಮತ್ತೆ ಗೃಹಸ್ಥರಾಗಬಹುದೆಂಬ ಮಾತು ಎಲ್ಲಿಯೂ ದೊರೆಯುವದಿಲ್ಲ. —೪೦

೧೧ ಸಂನ್ಯಾಸದಿಂದ ಹಿಂದಿರುಗಿದವರು ಪತಿತರೆನಿಸುವರು (೪೧...೪೨)

,, ಸಂನ್ಯಾಸಾಶ್ರಮದಲ್ಲಿದ್ದು ಆ ಆಶ್ರಮದ ಕರ್ಮಗಳನ್ನು ನಡೆಸುತ್ತಿರುವವರಿಗೆ ಹೇಗೊ ತಪ್ಪಿ ಒಮ್ಮೆ ಬ್ರಹ್ಮಚರ್ಯ ಮೊದಲಾದವು ಕೆಟ್ಟರೆ ಅನೇಕಬಗೆಯ ಮಣ್ಣುಗಳನ್ನು ಹಚ್ಚಿಕೊಂಡು ಸ್ನಾನಮಾಡುವದು, ಅನೇಕಸಹಸ್ರಸಂಖ್ಯೆಯ ಓಂಕಾರಜಪ, ಪ್ರಾಣಾಯಾಮ-ಮೊದಲಾದ ಪ್ರಾಯಶ್ಚಿತ್ತಗಳು ಮನುಸ್ಮೃತಿ ಮೊದಲಾದವುಗಳಲ್ಲಿ ಉಂಟು. ಆದರೂ ಆ ಆಶ್ರಮದಿಂದ ಹಿಂದಿರುಗಿದವರಿಗೆ ಪ್ರಾಯಶ್ಚಿತ್ತವಿಲ್ಲ. ಅವರು ಪತಿತರೆನಿಸುವರು ಎಂದರೆ ಕೆಳಕ್ಕೆ ಬಿದ್ದವರೆನಿಸುವರು. —೪೧

ಸಿ— ಬ್ರಾಹ್ಮಣರು ಶೂದ್ರಮೊದಲಾದವರ ಮನೆಗಳಲ್ಲಿ ಬಹು ಕಾಲ ಉಂಡರೆ ಬರುವ ಪಾಪದಂತೆ ಆಶ್ರಮದಿಂದ ಹಿಂದಿರುಗಿದವರ ಪಾಪವು ಉಪಪಾತಕವೆಂದು ಮನು ಮೊದಲಾದ ಕೆಲವರು

ಹೇಳುತ್ತಾರೆ. ಅವರ ಅಭಿಪ್ರಾಯದಲ್ಲಿ ಆ ಹಿಂದಿರುಗಿದವರಿಗೆ ಭೂಪ್ರದಕ್ಷಿಣೆ, ಸಕಲತೀರ್ಥಗಳಲ್ಲಿ ಸ್ನಾನಮಾಡುವದು– ಮೊದಲಾದವುಗಳೇ ಪ್ರಾಯಶ್ಚಿತ್ತಗಳು. ––೪೨

೧೨ ಸಂನ್ಯಾಸದಿಂದ ಹಿಂದಿರುಗಿದವರು ಸಮಾಜದಿಂದ ಹೊರಗಿರಬೇಕು (೪೩)

,, ಸಂನ್ಯಾಸದಿಂದ ಹಿಂದಿರುಗಿದವರು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲಿ ಬಿಡಲಿ; ಇಬ್ಬರೂ ಸಮಾಜದಿಂದ ಹೊರಗಿರತಕ್ಕವರು.––೪೩

೧೩ ಕರ್ಮಾಂಗಗಳನ್ನು ಬ್ರಹ್ಮವೆಂದು ನೋಡುವ ಉಪಾಸನೆಯನ್ನು ಋತ್ವಿಜನು ಮಾಡಬೇಕು (೪೪ . ೪೬)

ಪೂ— ಉದ್ಗೀಥ, ಆಹವನೀಯ-ಮೊದಲಾದ ಕರ್ಮಾಂಗಗಳನ್ನು ಬ್ರಹ್ಮವೆಂದು ಕಾಣುವ ಉಪಾಸನೆಯನ್ನು ಯಜಮಾನನು ಮಾಡತಕ್ಕದ್ದೆಂದು ಆತ್ರೇಯರ ಅಭಿಪ್ರಾಯ. ಏಕೆಂದರೆ ಅದರ ಫಲವು ಯಜಮಾನನಿಗೆಂದು ಶ್ರುತಿ ಇದೆ. ——೪೪

ಸಿ— ಆ ಉಪಾಸನೆಗಳನ್ನು ಋತ್ವಿಕ್ಕುಗಳು ಮಾಡಬಹುದೆಂದು ಔಡುಲೋಮಿ ಆಚಾರ್ಯರ ಮತ. ಏಕೆಂದರೆ ಕರ್ಮಗಳನ್ನು ಸಾಂಗವಾಗಿ ಅನುಷ್ಠಾನ ಮಾಡಿದ್ದಕ್ಕೆ ದಕ್ಷಿಣೆಯನ್ನು ಕೊಟ್ಟು ಯಜಮಾನನು ಅದನ್ನು ಋತ್ವಿಜರಿಂದ ಕೊಂಡುಕೊಳ್ಳುತ್ತಾನೆ. ಋತ್ವಿಜರು ಮಾಡಿದ ಕರ್ಮದ ಫಲವು ಯಜಮಾನನಿಗೆ ಹೇಗೋ ಹಾಗೆ ಋತ್ವಿಜರು ಮಾಡಿದ ಕರ್ಮಾಂಗವಾದ ಉಪಾಸನೆಯ ಫಲವೂ ಯಜಮಾನನಿಗೆ ಸಲ್ಲುತ್ತದೆ.

,, ಋತ್ವಿಜರು ಮಾಡಿದ ಅಂಗೋಪಾಸನೆಯು ಯಜಮಾನನಿಗೆ ಫಲವನ್ನು ಕೊಡುವದೆಂದು ಶ್ರುತಿ ಇದೆ. ———೪೬

೧೪ ಸಂನ್ಯಾಸವೂ ಗಾರ್ಹಸ್ಥ್ಯವೂ ಎರಡೂ ಉಂಟು (೪೭ . ೪೯)

,, ಕರ್ಮಕಾಂಡದ ಶ್ರುತಿಯಲ್ಲಿ ಗೃಹಸ್ಥರಿಗೆ ಸ್ವರ್ಗವೆಂಬ ಫಲಕ್ಕಾಗಿ ಅಗ್ನಿಹೋತ್ರ ಮೊದಲಾದ ಅನೇಕ ಕರ್ಮಗಳನ್ನು ವಿಧಿಸಿರುವಂತೆ ಜ್ಞಾನಕಾಂಡದ ಶ್ರುತಿಯಲ್ಲಿ ಮನೋನಿಗ್ರಹ ಮತ್ತು ಇಂದ್ರಿಯನಿಗ್ರಹ-ಇವುಗಳೊಡನೆ ಬ್ರಹ್ಮಸಾಕ್ಷಾತ್ಕಾರಕ್ಕಾಗಿ ಶ್ರವಣಮನನನಿದಿಧ್ಯಾಸನಗಳನ್ನು ಮಾಡಬೇಕೆಂದು ವಿಧಿ ಇದೆ. ಶ್ರವಣ, ಮನನ, ನಿದಿಧ್ಯಾಸನ–

ಎಂಬ ಮೂರರಲ್ಲಿ ಮೊದಲನೆ ಎರಡನ್ನು ಬ್ರಹ್ಮಸಾಕ್ಷಾತ್ಕಾರವನ್ನು ಬಯಸುವವರೆಲ್ಲರೂ ಬಹುಕಾಲ ನಡೆಸಬೇಕು. ಮೂರನೆ ನಿದಿಧ್ಯಾಸನಕ್ಕೆ ಆ ನಿಯಮವಿಲ್ಲ. ಯಾರಿಗೆಶ್ರವಣಮನನಗಳಾದ ಮೇಲೆಯೂ ವರ್ಣಾಶ್ರಮಾಭಿಮಾನ, ಕುಲಾಭಿಮಾನ-ಮೊದಲಾದ ದೇಹಾಭಿಮಾನವಿರುವದೋ ಅವರು ಬಹುಕಾಲ ನಿದಿಧ್ಯಾಸನವನ್ನು ಮಾಡಬೇಕು. ಯಾರ ಚಿತ್ತವು ಶುದ್ಧವಾಗಿ ದೇಹಾಭಿಮಾನವು ಶ್ರವಣಮನನಗಳಿಂದಲೆ ಕಳಲಿ ಹೋಗಿರುವದೊ ಅವರು ನಿದಿಧ್ಯಾಸನವನ್ನು ಸ್ವಲ್ಪಕಾಲ ಮಾಡಿದರೆ ಸಾಕು. ಚಿತ್ತಶುದ್ಧಿ ಇದ್ದು ಪ್ರಬಲವಾದ ಈಶ್ವರಾನುಗ್ರಹ ಉಳ್ಳವರಿಗೆ ಶ್ರವಣಮನನಗಳು ಕೂಡ ಸ್ವಲ್ಪ ದಿನಗಳದೇ ಸಾಕಾಗುವದು. —೪೭

ಪೂ— ಬ್ರಹ್ಮಚರ್ಯವನ್ನು ಮುಗಿಸಿಕೊಂಡು ಬಂದು ಕುಟುಂಬಿಯಾಗಿ ಸಾಯುವ ತನಕ ವೇದಾಧ್ಯಯನವನ್ನು ಮಾಡಿಕೊಂಡಿರಬೇಕೆಂಬ ಶ್ರುತಿಯಲ್ಲಿ ಬ್ರಹ್ಮಚರ್ಯ ಮತ್ತು ಗೃಹಸ್ಥಾಶ್ರಮ-ಇವೆರಡೇ ಲೆಕ್ಕಕ್ಕೆ ಬಂದಿವೆ ಅಲ್ಲಿ ಸಂನ್ಯಾಸದ ಹೆಸರೇ ಇಲ್ಲ. ಆದ್ದರಿಂದ ಅಗ್ನಿಹೋತ್ರ ಮೊದಲಾದ ಕರ್ಮಗಳಿಗೂ ಶ್ರವಣಮನನಾದಿಗಳಿಗೂ ಗೃಹಸ್ಥರೇ ತಕ್ಕವರೆನ್ನಬೇಕಾಗುವದಲ್ಲ !

ಸಿ— ಗೃಹಸ್ಥಾಶ್ರಮದಲ್ಲಿ ಎಲ್ಲ ಆಶ್ರಮಗಳ ಧರ್ಮಗಳೂ ಅಡಕವಾಗಿವೆ. ಅಷ್ಟುಮಾತ್ರದಿಂದ ಅಲ್ಲಿ ಗೃಹಸ್ಥಾಶ್ರಮದ ಮಾತಿನಿಂದಲೆ ಕೊನೆಯಾಗಿದೆ. ಸಂನ್ಯಾಸವನ್ನು ವಿಧಿಸುವ ಬಹುಶ್ರುತಿಗಳೂ ಇವೆ. ಇದರ ಮೇಲೆ ಗೃಹಸ್ಥರಿಗೆ ಅವರ ಕರ್ಮಗಳ ಜೊತೆಗೆ ಶ್ರವಣ, ಮನನ-ಮೊದಲಾದವುಗಳಿಗೆ ಅವಕಾಶವೆ ಇರುವದಿಲ್ಲ. ಶ್ರವಣಮನನಗಳಿಗೆ ಸಂನ್ಯಾಸಿಗಳೇ ತಕ್ಕವರು. ಸಾಯುವ ತನಕ ಕುಟುಂಬಿಯಾಗಿರಬೇಕೆಂಬ ಮಾತು ವಿರಕ್ತರಲ್ಲದವರನ್ನು ಗುರಿಯಲ್ಲಿಟ್ಟುಕೊಂಡು ಆಡಿದ್ದು. —೪೮

ಪೂ— ಬ್ರಹ್ಮಚರ್ಯ, ಗಾರ್ಹಸ್ಥ್ಯ, ಸಂನ್ಯಾಸ-ಈ ಮೂರು ಆಶ್ರಮಗಳು ಶಾಸ್ತ್ರಕ್ಕೆ ಒಪ್ಪಾದವುಗಳಾಗಲಿ. ವಾನಪ್ರಸ್ಥವೇನೂ ಶಾಸ್ತ್ರಸಿದ್ಧವಾದದ್ದಾಗಿರಲಾರದು. ಅದನ್ನು ಯಾರೂ ನಡೆಸುವದು ಕಾಣುವದಿಲ್ಲ.

ಸಿ— ಮೌನವೆಂಬ ಧರ್ಮವೇ ಮುಖ್ಯವಾಗಿ ಉಳ್ಳ ಸಂನ್ಯಾಸಿಗಳಿಗೆ ಇತರರಿಗಿಂತ ಬೇರೆಯಾಗಿ ಶ್ರವಣ, ಮನನಗಳನ್ನು ವಿಧಿಸಿದಂತೆ ವಾನಪ್ರಸ್ಥರಿಗೆ

ಬೇರೆ ಧರ್ಮಗಳ ಉಪದೇಶವಿದೆ. ಅವರು ವಿಶೇಷವಾಗಿ ಉಪವಾಸ ಮಾಡುತ್ತ ದೇಹದಂಡನೆಗೆ ಸಾಧನವಾಗಿ ಪಂಚಾಗ್ನಿಮಧ್ಯದ ತಪಸ್ಸು ಮೊದಲಾದವುಗಳನ್ನು ಮಾಡುತ್ತಿರಬೇಕೆಂದು ಶ್ರುತಿಸ್ಮೃತಿಗಳು ಹೇಳಿವೆ. —೪೯

೧೫ ಸಂನ್ಯಾಸಿಯು ಯಾವಾಗಲೂ ಧ್ಯಾನವನ್ನು ಮಾಡಿಕೊಂಡಿರಬೇಕು (೫೦)

ಸಿ— ಸಂನ್ಯಾಸಿಯು ಹುಡುಗನಂತೆ ತನ್ನ ಜ್ಞಾನ ಮತ್ತು ವೈರಾಗ್ಯ ಮೊದಲಾದವುಗಳನ್ನು ಲೋಕಕ್ಕೆ ತೋರಿಸದೆ ದಂಭ, ದರ್ಪ, ಅಹಂಕಾರ- ಮೊದಲಾದವುಗಳಿಲ್ಲದವನಾಗಿ ಯಾವಾಗಲೂ ಬ್ರಹ್ಮಧ್ಯಾನವನ್ನು ಮಾಡಿಕೊಂಡಿರಬೇಕು. ಏಕೆಂದರೆ ದಂಭ ಮೊದಲಾದವುಗಳಿಲ್ಲದಿದ್ದರೆ ಮಾತ್ರ ಆತ್ಮಧ್ಯಾನವು ನಡೆಯುವದು. —೫೦

೧೬ ಪ್ರಬಲವಾದ ಪ್ರತಿಬಂಧವಿಲ್ಲದಿದ್ದರೆ ಈಗಲೆ ಇಲ್ಲಿಯೆ ಬ್ರಹ್ಮಸಾಕ್ಷಾತ್ಕಾರವಾಗುವದು (೫೧)

,, ದೇಹ ಮೊದಲಾದವುಗಳ ಮೇಲಿನ ಅಭಿಮಾನವು ಅಡ್ಡವಾಗಿಲ್ಲದಿದ್ದರೆ ಶ್ರವಣಮನನನಿದಿಧ್ಯಾಸನಗಳಿಂದ ಈ ಜನ್ಮದಲ್ಲಿಯೇ ಬ್ರಹ್ಮಸಾಕ್ಷಾತ್ಕಾರವಾಗುವದು. ಆ ಅಭಿಮಾನವಿನ್ನೂ ಇದ್ದರೆ ಮುಂದಿನ ಜನ್ಮದಲ್ಲಿ ಮತ್ತೆ ಶ್ರವಣಮನನಗಳು ನಡೆದ ಮೇಲೆ ಸಾಕ್ಷಾತ್ಕಾರವಾಗುತ್ತದೆ. ಹೀಗೆಂದು ಸ್ಮೃತಿಗಳು ಹೇಳುತ್ತವೆ. ಚಿತ್ತಶುದ್ಧಿಯಾಗಿ ದೇಹಾಭಿಮಾನವು ಸಡಿಲವಾಗಿ ಈಶ್ವರಾನುಗ್ರಹ ಉಳ್ಳವರಿಗೆ ಒಂದು ಜನ್ಮದಲ್ಲಿ ನಡೆದ ಶ್ರವಣಮನನಗಳೇ ಬ್ರಹ್ಮಸಾಕ್ಷಾತ್ಕಾರಕ್ಕೆ ಸಾಕಾಗುತ್ತವೆ.— ೫೧

೧೭ ಬ್ರಹ್ಮಸಾಕ್ಷಾತ್ಕಾರವಾದೊಡನೆ ಮೋಕ್ಷವೆ (೫೨)

,, ಮೋಕ್ಷವೂ ಬ್ರಹ್ಮಸಾಕ್ಷಾತ್ಕಾರದಂತೆ ಈಶ್ವರಾನುಗ್ರಹ ಉಳ್ಳವರಿಗೆ ಶ್ರವಣಾದಿಗಳಿಂದ ಈ ಜನ್ಮದಲ್ಲಿಯೇ ಆಗುವದು. ಉಳಿದವರು ಮುಂದಿನ ಜನ್ಮವನ್ನು ಕಾಯಬೇಕಾಗುವದು. ಬ್ರಹ್ಮಸಾಕ್ಷಾತ್ಕಾರವಾದೊಡನೆ ಮೊಕ್ಷವೆ. ಮೋಕ್ಷದಲ್ಲಿ ತಾರತಮ್ಯವೇನೂ ಇಲ್ಲ. —೫೨

---

# ಅಧ್ಯಾಯ ೪

ಫಲವಕಣ್ಣಿಗೆ ಕಟ್ಟಿದ ಹಾಗೆ ಮಾಡುವದು

---

## ಪಾದ ೧

ಜೀವನ್ಮುಕ್ತಿಯ ಸ್ವರೂಪ

---

೧ ಬ್ರಹ್ಮಜ್ಞಾನವು ಮತ್ತೆ ಮತ್ತೆ ಬಹುಕಾಲ ಅಭ್ಯಾಸ ಮಾಡತಕ್ಕದ್ದು (೧...೨)

ಸಿ— ಬ್ರಹ್ಮವಿಷಯಕವಾದ ಶ್ರವಣಮನನನಿದಿಧ್ಯಾಸನಗಳನ್ನು ಮತ್ತೆ ಮತ್ತೆ ಅನೇಕ ವೇಳೆ ಅಭ್ಯಾಸಮಾಡಬೇಕೆಂದು ಅನೇಕಶ್ರುತಿಗಳು ಹೇಳುತ್ತವೆ. —೧

,, ಬಂಗಾರ, ರತ್ನ, ಮುತ್ತು, ಹವಳ—ಮೊದಲಾದವುಗಳ ಯೋಗ್ಯತೆಯು ಜ್ಞಾನವಾಗಬೇಕಾದರೆ ಬಹುಕಾಲ ವಿಚಾರಮಾಡಬೇಕಾಗುತ್ತವೆ ಅದರಂತೆ ಬ್ರಹ್ಮಜ್ಞಾನವೂ ಬಹುಕಾಲ ವಿಚಾರಮಾಡತಕ್ಕದ್ದು. —೨

೨ ಈಶ್ವರನನ್ನು ತಾನೆಂದೇ ಉಪಾಸನೆಮಾಡಬೇಕು (೩)

,, ಉಪಾಸನೆಗಳಲ್ಲಿ ಮೂರು ಬಗೆಗಳಿವೆ. ತನಗೂ ಸಗುಣಬ್ರಹ್ಮನಿಗೂ ಭೇದವಿಲ್ಲವೆಂಬ ಅಹಂಗ್ರಹೋಪಾಸನೆಗಳು, ಜಡವಾದ ನಾಮಮೊದಲಾದ ಪದಾರ್ಥಗಳನ್ನು ಬ್ರಹ್ಮವಾಗಿ ಕಾಣುವ ಪ್ರತೀಕೋಪಾಸನೆಗಳು, ಕರ್ಮದ ಅಂಗಗಳಾದ ಉದ್ಗೀಥ ಮೊದಲಾದ ಪದಾರ್ಥಗಳನ್ನು ಬ್ರಹ್ಮವಾಗಿ ಕಾಣುವ ಅಂಗಾವಬದ್ಧೋಪಾಸನೆಗಳು. ದಹರ, ವೈಶ್ವಾನರ—ಮೊದಲಾದ ಉಪಾಸನೆಗಳು ಅಹಂಗ್ರಹೋಪಾಸನೆಗಳು. ಅಲ್ಲಿ ಪರಮಾತ್ಮನನ್ನು ತಾನೆಂದು ಧ್ಯಾನಿಸಬೇಕು. ಜೀವನಿಗೂ ಸಗುಣಬ್ರಹ್ಮಕ್ಕೂ ಅಭೇದವನ್ನು ಸೂಚಿಸುವ ಶ್ರುತಿ ಇದೆ. ವೈಶ್ವಾನರನು ನಾನು, ದಹರಾಕಾಶನು ನಾನು, ಕಣ್ಣಲ್ಲಿರುವ ಪುರುಷನು ನಾನು, ದೊಡ್ಡ ಪದಾರ್ಥವೂ ನಾನು—ಹೀಗೆಂದು ಸಗುಣೋಪಾಸನೆಗಳನ್ನು ಮಾಡಬೇಕು. —೩

೩ ನಾಮ ಮೊದಲಾದ ಪ್ರತೀಕಗಳನ್ನು ತಾನೆಂದು ತಿಳಿಯಬಾರದು (೪)

ಸಿ— 'ನಾಮವನ್ನು ಬ್ರಹ್ಮವೆಂದು ಉಪಾಸನೆಮಾಡು; ಮನವನ್ನು ಬ್ರಹ್ಮವೆಂದು ಉಪಾಸನೆಮಾಡು; ಆದಿತ್ಯನನ್ನು ಬ್ರಹ್ಮನೆಂದು ಉಪಾಸನೆಮಾಡು' ಎಂದಿರುವವುಗಳೆಲ್ಲ ಪ್ರತೀಕೋಪಾಸನೆಗಳು. ಇವುಗಳಲ್ಲಿ ಜೀವಬ್ರಹ್ಮರ ಅಭೇದವನ್ನು ಧ್ಯಾನಿಸಬಾರದು. ಏಕೆಂದರೆ ಅಲ್ಲಿ ಆ ಉದ್ದೇಶವಿಲ್ಲ. ಅಲ್ಲಿ ನಾಮಕ್ಕೂ ಬ್ರಹ್ಮಕ್ಕೂ ಭೇದವಿಲ್ಲವೆಂದು ಮಾತ್ರ ಧ್ಯಾನಿಸತಕ್ಕದ್ದು. —೪

೪ ಆದಿತ್ಯಮಂಡಲ ಮೊದಲಾದವುಗಳಲ್ಲಿ ಬ್ರಹ್ಮವೆಂಬ ಭಾವನೆಯನ್ನಿಡಬೇಕು (೫)

ಪೂ— ಆದಿತ್ಯಮಂಡಲ ಮೊದಲಾದವುಗಳಲ್ಲಿ ಬ್ರಹ್ಮವೆಂಬ ಭಾವನೆಯನ್ನಿಟ್ಟು ಧ್ಯಾನಿಸಬೇಕೊ? ಬ್ರಹ್ಮದಲ್ಲಿ ಆದಿತ್ಯಮಂಡಲ ಮೊದಲಾದವುಗಳ ಭಾವನೆಯನ್ನಿಟ್ಟು ಧ್ಯಾನಿಸಬೇಕೊ?

ಸಿ— ನಿಕೃಷ್ಟವಾದ ಆದಿತ್ಯಮಂಡಲ ಮೊದಲಾದವುಗಳಲ್ಲಿ ಉತ್ಕೃಷ್ಟವಾದ ಬ್ರಹ್ಮನ ಭಾವನೆಯನ್ನಿಡಬೇಕು. ಏಕೆಂದರೆ ಹಾಗೆ ಮಾಡಿದರೆ ಹೆಚ್ಚು ಫಲ ಉಂಟಾಗುತ್ತದೆ. ಲೋಕದಲ್ಲಿ ನಿಕೃಷ್ಟನಾದವನನ್ನು ಉತ್ಕೃಷ್ಟನನ್ನಾಗಿ ಕಂಡರೆ ಫಲವು ಹೆಚ್ಚುವದು ಕಂಡುಬಂದಿದೆ. ಉತ್ಕೃಷ್ಟನನ್ನು ನಿಕೃಷ್ಟನನ್ನಾಗಿ ಕಂಡರೆ ಅದು ಹೆಚ್ಚಿನ ಫಲವನ್ನು ಕೊಡಲಾರದಾಗುತ್ತದೆ. ಅಷ್ಟೇ ಅಲ್ಲ. ಅದು ಅನರ್ಥಕ್ಕೇ ಕಾರಣವಾಗುತ್ತದೆ. —೫

೫ ಕರ್ಮದ ಅಂಗಗಳನ್ನು ಬ್ರಹ್ಮವೆಂದು ಕಾಣುವ ಉಪಾಸನೆಗಳಲ್ಲಿ ಆ ಅಂಗಗಳಲ್ಲಿ ಬ್ರಹ್ಮಭಾವನೆಯನ್ನಿಡಬೇಕು (೬)

,, 'ಉದ್ಗೀಥವನ್ನು ಬ್ರಹ್ಮವೆಂದು ಉಪಾಸನೆ ಮಾಡು; ಆಹವನೀಯವನ್ನು ಬ್ರಹ್ಮವೆಂದು ಉಪಾಸನೆಮಾಡು' ಎಂಬ ಮುಂತಾದ ಅಂಗಾವಬದ್ಧೋಪಾಸನೆಗಳಲ್ಲಿ ಅಂಗಗಳಾದ ಉದ್ಗೀಥ, ಆಹವನೀಯ-ಮೊದಲಾದವುಗಳಲ್ಲಿ ಬ್ರಹ್ಮವೆಂಬ ಭಾವನೆಯನ್ನಿಡಬೇಕು. —೬

೬ ಕುಳಿತು ಧ್ಯಾನಿಸಬೇಕು (೭..೧೦)

ಸಿ— ತನಗೆ ಹಾಯಾಗಿರುವ ಆಸನದಲ್ಲಿ ಕುಳಿತು ಧ್ಯಾನಿಸಬೇಕು. ಏಕೆಂದರೆ ಕುಳಿತುಕೊಂಡಾಗ ಮಾತ್ರ ಚಿತ್ತವು ಒಮ್ಮುಖವಾಗುವ ಸಂಭವ ಉಂಟು. —೭

ಸಿ— 'ಧ್ಯಾನ' ಎಂಬ ಮಾತಿನಿಂದಲೂ ಕುಳಿತುಕೊಂಡಿರಬೇಕೆಂದು ತೋರುತ್ತದೆ. ಧ್ಯಾನವೆಂದರೆ ಪ್ರಪಂಚದ ವಿಷಯಕವಾದ ವೃತ್ತಿಗಳನ್ನೆಲ್ಲ ಹಿಂದಕ್ಕೆ ತಳ್ಳಿ ಬ್ರಹ್ಮವಿಷಯಕವಾದ ವೃತಿಯನ್ನು ಎಣ್ಣೆಯ ಎಳೆಯಂತೆ ಮುಕ್ಕು ಹೋಗದ ಹಾಗೆ ಇಟ್ಟುಕೊಂಡಿರುವದು. ಇಂಥ ಧ್ಯಾನವು ಮಲಗಿದವನಿಗೆ ಆಗುವದಿಲ್ಲ. ಎಕೆಂದರೆ ಆಗ ನಿದ್ರೆಯು ಬಂದು ಕಾಲುಹಾಕುತ್ತದೆ. ನಿಂತಿದ್ದವನಿಗೂ ಧ್ಯಾನವು ಮೈಗೂಡುವದಿಲ್ಲ. ಎಕೆಂದರೆ ಕಾಲು ನೋಯುತ್ತದೆ. ಓಡಾಡುವವನಿಗೂ ಅದು ದಕ್ಕುವದಿಲ್ಲ. ಏಕೆಂದರೆ ಮುಳ್ಳು ಮೊದಲಾದವುಗಳು ಅವನ ಮನಸ್ಸನ್ನು ಹೊರಕ್ಕೆಳೆಯುತ್ತವೆ. ಆದ್ದರಿಂದ ಕುಳಿತವನಿಗೇ ಧ್ಯಾನ. —೮

,, ಧ್ಯಾನಕ್ಕೆ ಅಲುಗದೆ ಇರುವಿಕೆಯು ಬೇಕಾಗುತ್ತದೆ. ಆದ್ದರಿಂದ ಅದಕ್ಕಾಗಿ ಕುಳಿತೇ ಧ್ಯಾನಿಸಬೇಕು. —೯

,, ಸ್ಮೃತಿಗಳು ಕೂಡ ಕುಳಿತೇ ಧ್ಯಾನಿಸಬೇಕೆಂದು ಹೇಳುತ್ತವೆ—೧೦

ಧ್ಯಾನಿಸುವ ಸ್ಥಲವು ಮನಸ್ಸು ತಿಳಿಯಾಗಿ ಒಮ್ಮುಖವಾಗುವಹಾಗಿರಬೇಕು (೧೧)

,, ನದೀವಡಗಳಲ್ಲಾಗಲಿ ದೇವಾಲಯಗಳಲ್ಲಾಗಲಿ ಪುಣ್ಯಕ್ಷೇತ್ರಗಳಲ್ಲಾಗಲಿ ತನ್ನೂರಲ್ಲಾಗಲಿ ಎಲ್ಲಿ ಮನಸ್ಸು ತಿಳಿಯಾಗಿ ಒಮ್ಮುಖವಾಗುವದೊ ಅಲ್ಲಿ ಧ್ಯಾನವನ್ನು ಮಾಡಬೇಕು. ಚಿತ್ತಶುದ್ಧಿಯುಳ್ಳವರಿಗೆ ಎಲ್ಲಿಯಾದರೂ ಮನಸ್ಸು ತಿಳಿಯಾಗಿರುತ್ತದೆ. —೧೧

೮ ಧ್ಯಾನವು ಸಾಯುವವರೆಗೂ ನಡೆಯುತ್ತಿರಬೇಕು (೧೨)

,, ಸಾಯುವ ತನಕ ಧ್ಯಾನವನ್ನು ಮಾಡುತ್ತಿರಬೇಕು. ಏಕೆಂದರೆ ಸಾಯುವಾಗ ಅದರ ನೆನಪೇ ಮುಂದೆ ಬಂದು ಅವನನ್ನು ಪಾರುಮಾಡುವದೆಂದು ಸ್ಮೃತಿ ಇದೆ. —೧೨

೯ ಬ್ರಹ್ಮಸಾಕ್ಷಾತ್ಕಾರವಾದರೆ ಪಾಪಗಳು ಹೇಳುವದಕ್ಕೆ
ಹೆಸರಿಲ್ಲದಂತಾಗುವವು (೧೩)

ಸಿ— ಮನುಷ್ಯನಿಗೆ ಫಲವನ್ನು ಕೊಡುವದಕ್ಕೆ ಬರುವ ಕರ್ಮಗಳು ಮೂರುಬಗೆ ಇವೆ : ಹಿಂದಿನ ಕರ್ಮಗಳಲ್ಲಿ ಮುಂದೆ ದೇಹವನ್ನು ಕೊಡುವದಕ್ಕಾಗಿ ಕಾದಿರುವ ಪಾಪಗಳ ರಾಶಿಯೊಂದು; ಈ ಜನ್ಮದಲ್ಲಿ ಫಲವನ್ನು ಕೊಡುವದಕ್ಕಾಗಿ ಮಡಿಲಿಗೆ ಬಿದ್ದಿರುವ ಪಾಪಗಳ ರಾಶಿಯೊಂದು ;

ಜ್ಞಾನವಾದ ಮೇಲೆ ಈ ಜನ್ಮದಲ್ಲಿ ಮಾಡುವ ಪಾಪಗಳ ರಾಶಿಯೊಂದು. ಬ್ರಹ್ಮದ ಸಾಕ್ಷಾತ್ಕಾರವಾದರೆ ಆಮೇಲೆ ಅವನಿಗೆ ದೇಹಾಭಿಮಾನವಿಲ್ಲದಿರುವದರಿಂದ ಕಮಲದೆಲೆಗೆ ನೀರು ಅಂಟದಿರುವಂತೆ ಅವನು ಮಾಡುವ ಯಾವ ಪಾಪವೂ ಅವನಿಗೆ ಅಂಟುವದಿಲ್ಲ. ಮುಂದೆ ದೇಹಗಳನ್ನು ಕೊಡುವದಕ್ಕೆ ಕಾದಿರುವ ಪಾಪಗಳಾದರೂ ಬೆಂಕಿಯಲ್ಲಿ ಹಾಕಿದ ಹತ್ತಿಯಂತೆ ಸುಟ್ಟುಹೋಗುವವು. ಈ ಅಭಿಪ್ರಾಯಕ್ಕೆ ಸ್ಮೃತಿಯ ಆಧಾರವೂ ಇದೆ. —೧೩

೧೦ ಜ್ಞಾನಿಗಳಿಗೆ ಪುಣ್ಯಗಳ ಸೋಂಕೂ ಇರುವದಿಲ್ಲ (೧೪)

ಸಿ— ಬ್ರಹ್ಮಸಾಕ್ಷಾತ್ಕಾರದಿಂದ ದೇಹಾಭಿಮಾನವು ಹೋದರೆ ಆಮೇಲೆ ಮಾಡುವ ಪುಣ್ಯಗಳ ಸೋಂಕೂ ಅವನಿಗಿಲ್ಲ. ಗುಡ್ಡೆಯಾಗಿ ಬಿದ್ದಿರುವ ಪುಣ್ಯಗಳು ಕೂಡ ಅವನಿಗೆ ಅಂಟಲಾರವು. —೧೪

೧೧ ಈ ಜನ್ಮದಲ್ಲಿ ಫಲವನ್ನು ಕೊಡುವ ಪುಣ್ಯಪಾಪಗಳಿಗೆ ನಾಶವಿಲ್ಲ (೧೫)

,, ಈ ಜನ್ಮದಲ್ಲಿ ಫಲವನ್ನು ಕೊಡುವದಕ್ಕೆ ಮಡಿಲಿಗೆ ಬಿದ್ದಿರುವ ಪಾಪಪುಣ್ಯಗಳ ಹೊರತು ಉಳಿದವುಗಳೆಲ್ಲ ಮಾಯವಾಗಿ ಹೋಗುವವು. ಈ ದೇಹದಲ್ಲಿ ಫಲವನ್ನು ಕೊಡುವದಕ್ಕೆ ಗಂಟುಬಿದ್ದಿರುವ ಪುಣ್ಯಪಾಪಗಳಿಗೆ ಮಾತ್ರ ನಾಶವಿಲ್ಲ. ಏಕೆಂದರೆ ಅವು ಅನುಭವವನ್ನು ಕೊಟ್ಟು ಹೋಗುವ ತನಕ ಶರೀರವಿರುವದು. ವಿದೇಹಮುಕ್ತಿಗೆ ಆ ಅನುಭವಗಳು ಮುಗಿಯುವ ತನಕಮಾತ್ರ ತಡ. ಅವು ಮುಗಿದೊಡನೆ ಅವನು ವಿದೇಹ ಕೈವಲ್ಯವನ್ನು ಪಡೆಯುತ್ತಾನೆ. —೧೫

೧೨ ಜ್ಞಾನಸಾಧನವಾದ ಕರ್ಮಗಳಿಗೆ ನಾಶವಿಲ್ಲ (೧೬ . . ೧೭)

,, ಜ್ಞಾನವನ್ನು ಪಡೆಯಬೇಕೆಂಬ ಉದ್ದೇಶದಿಂದ ಮಾಡಿದ ಅಗ್ನಿಹೋತ್ರ ಮೊದಲಾದವುಗಳು ತಮ್ಮ ಕೆಲಸವಾದ ಜ್ಞಾನವನ್ನುಂಟುಮಾಡುತ್ತವೆ. ಇದು ಶ್ರುತಿಯ ಅಭಿಪ್ರಾಯ. ಆದ್ದರಿಂದ ಅಗ್ನಿಹೋತ್ರ ಮೊದಲಾದವುಗಳು ಜ್ಞಾನವನ್ನುಂಟು ಮಾಡುವದಕ್ಕಾಗಿಯೇ ಇರುವವು. ಫಲವನ್ನುಂಟುಮಾಡುತ್ತಲೆ ಕರ್ಮಗಳು ನಾಶವಾಗುವವೆಂಬುದರ ಮೇಲೆ ಫಲವಾದ ಬ್ರಹ್ಮಜ್ಞಾನದಿಂದ ಅವುಗಳಿಗೆ ನಾಶ ಉಂಟೆಂದು ಹೇಳಬೇಕಷ್ಟೆ. ಬ್ರಹ್ಮಜ್ಞಾನವು ಫಲವೆಂಬುದರ ದೃಷ್ಟಿಯಿಂದ ಅದು

ಆ ಕರ್ಮಗಳನ್ನು ನಾಶಮಾಡುವದೆನ್ನಬೇಕೇ ಹೊರತು ತನ್ನ ಜ್ಞಾನ ಸ್ವರೂಪದಿಂದ ಅದು ಆ ಕರ್ಮಗಳಿಗೆ ನಾಶಕವಲ್ಲ. —೧೬

ಸಿ— ಜ್ಞಾನಕ್ಕೆ ಸಾಧನವಾದ ಅಗ್ನಿಹೋತ್ರ ಮೊದಲಾದವುಗಳಿಗಿಂತ ಬೇರೆಯಾಗಿ ಸ್ವರ್ಗವನ್ನು ಬಯಸಿ ಹಿಂದಿನ ಜನ್ಮದಲ್ಲಿ ಮಾಡಿದ ಅಗ್ನಿಹೋತ್ರ ಮೊದಲಾದವುಗಳು ಬ್ರಹ್ಮಜ್ಞಾನದಿಂದ ಹೋಗುವವೆಂದು ಕೆಲವು ಆಚಾರ್ಯರ, ಎಂದರೆ ಜೈಮಿನಿಗಳ ಮತ್ತು ಬಾದರಾಯಣರ, ಅಭಿಪ್ರಾಯ. ಅಥವಾ ಎಲ್ಲ ಕರ್ಮಗಳೂ ಜ್ಞಾನಕ್ಕೆ ಸಾಧನಗಳೇ ಆಗಿ ಜ್ಞಾನಕ್ಕೆ ಸಾಧನವಲ್ಲದ ಕರ್ಮವೆ ಇಲ್ಲದಿರುವಾಗ ಜ್ಞಾನಸಾಧನವಾದ ಕರ್ಮಗಳಿಗೆ ನಾಶವಿಲ್ಲವೆಂಬ ಮಾತಿಗೇನರ್ಥವೆಂದರೆ ಶಾಣ್ವಶಾಖೆಯು ಜ್ಞಾನಸಾಧನವಲ್ಲದೆ ಸ್ವರ್ಗಸಾಧನಗಳಾದ ಅಗ್ನಿಹೋತ್ರ ಮೊದಲಾದವುಗಳನ್ನು ಹೇಳುವದೆಂದು ಜೈಮಿನಿಗಳೂ ಬಾದರಾಯಣರೂ ಒಪ್ಪಿದ್ದಾರೆ. ಅವು ಬ್ರಹ್ಮಜ್ಞಾನದಿಂದ ನಾಶವಾಗುವವೆಂದು ಇಲ್ಲಿ ಅಭಿಪ್ರಾಯ. ಜ್ಞಾನಸಾಧನವಾದ ಮತ್ತು ಸ್ವರ್ಗಸಾಧನವಾದ ಅಗ್ನಿಹೋತ್ರಗಳೆರಡೂ ಒಂದೆ. ಜ್ಞಾನದ ಉದ್ದೇಶದಿಂದ ಮಾಡಿದ್ದು ಜ್ಞಾನಸಾಧನವಾಗುತ್ತದೆ; ಸ್ವರ್ಗದ ಉದ್ದೇಶದಿಂದ ಮಾಡಿದ್ದು ಸ್ವರ್ಗಸಾಧನವಾಗುತ್ತದೆ. ಇಷ್ಟು ಮಾತ್ರದಿಂದ ಅವುಗಳಿಗೆ ಭೇದ. —೧೭

೧೩ ಉಪಾಸನೆಯಿಂದ ಕೂಡಿದ ಕರ್ಮಗಳು ಈ ಜನ್ಮದಲ್ಲಿಯೇ ಜ್ಞಾನವನ್ನುಂಟುಮಾಡುವವು (೧೮)

,, ಉದ್ಗೀಥ, ಆಪವನೀಯ—ಮೊದಲಾದ ಕರ್ಮಾಂಗಗಳನ್ನು ಬ್ರಹ್ಮವೆಂದು ಕಾಣುವ ಉಪಾಸನೆಯೊಡನೆ ಮಾಡಿದ ಅಗ್ನಿಹೋತ್ರ ಮೊದಲಾದ ಕರ್ಮಗಳು ಈ ಜನ್ಮದಲ್ಲಿಯೇ ತಡವಿಲ್ಲದೆ ಬ್ರಹ್ಮಜ್ಞಾನವನ್ನುಂಟು ಮಾಡುತ್ತವೆ. ಆ ಉಪಾಸನೆ ಇಲ್ಲದೆ ಮಾಡಿದ ಕರ್ಮಗಳು ತಡವಾಗಿ ಮುಂದಿನ ಜನ್ಮಗಳಲ್ಲಿ ಬ್ರಹ್ಮಜ್ಞಾನವನ್ನು ಹುಟ್ಟಿಸುವವು. —೧೮

೧೪ ಈ ಜನ್ಮಕ್ಕೆ ಗಂಟು ಬಿದ್ದ ಫಲಗಳನ್ನು ಅನುಭವಿಸಿಯೇ ಮುಗಿಸಬೇಕು (೧೯)

,, ಈ ಜನ್ಮದಲ್ಲಿ ಫಲವನ್ನು ಕೊಡುವದಕ್ಕೆ ಮಡಿಲಿಗೆ ಬಿದ್ದಿರುವ ಪುಣ್ಯಪಾಪಗಳ ಫಲಗಳಾದ ಸುಖದುಃಖಗಳನ್ನು ಅನುಭವಿಸಿಯೇ ಮುಗಿಸಬೇಕು. ಆಮೇಲೆ ಒಡನೆ ವಿದೇಹಕೈವಲ್ಯ ಉಂಟಾಗುವದು. —೧೯

## ಪಾದ ೨

### ಸಾವಿನ ರೀತಿ ಮತ್ತು ಪ್ರಯಾಣ

---

೧ ಇಂದ್ರಿಯಗಳೆಲ್ಲ ಮನಸಿನೊಳಗೆ ಸೇರಿಕೊಳ್ಳುವವು (೧..೨)

ಸೂ— ವಾಕ್ಕು ಮನಸಿನೊಳಕ್ಕೆ ಹೋಗಿ ಅಡಗಿಕೊಳ್ಳುವದು. ಲೋಕದಲ್ಲಿ ಸಾಯುವವರಿಗೆ ಮಾತು ನಿಂತ ಮೇಲೆಯೂ ಮನಸ್ಸಿನ ಕೆಲಸವು ಕಾಣುತ್ತಿರುವದು. ಶ್ರುತಿಯೂ ಈ ಅರ್ಥವನ್ನು ಹೇಳುವದು. —೧

,, 'ವಾಕ್ಕು' ಎಂಬ ಮಾತಿನಿಂದ ಎಲ್ಲ ಇಂದ್ರಿಯಗಳನ್ನೂ ತೆಗೆದುಕೊಳ್ಳಬೇಕು. ಎಲ್ಲ ಇಂದ್ರಿಯಗಳೂ ವಾಕ್ಕನ್ನು ಹಿಂಬಾಲಿಸಿ ಮನಸಿನೊಳಕ್ಕೆ ಸೇರಿಕೊಳ್ಳುವವು. —೨

೨ ಮನಸ್ಸು ಪ್ರಾಣದೊಡನೆ ಕೂಡಿಕೊಳ್ಳುತ್ತದೆ (೩)

,, ಮನಸ್ಸು ಪ್ರಾಣದೊಡನೆ ಕೂಡಿಕೊಳ್ಳುವದೆಂದು ಮುಂದಿನ ಮಾತಿನಲ್ಲಿದೆ. —೩

೩ ಪ್ರಾಣವು ಜೀವನೊಡನೆ ಪರಲೋಕಕ್ಕೆ ಹೋಗುತ್ತದೆ (೪....೬)

,, ಆ ಪ್ರಾಣವು ಒಡೆಯನಾದ ಜೀವನೊಡನೆ ಸೇರಿಹೋಗುತ್ತದೆ. ಹೀಗೆ ಇಂದ್ರಿಯಗಳೂ ಪ್ರಾಣವೂ ಎಲ್ಲವೂ ಜೀವನೊಡನೆ ಪರಲೋಕಕ್ಕೆ ಹೋಗುತ್ತವೆ. —೪

,, ಒಡೆಯನಾದ ಜೀವನು ತೇಜಸ್ಸಿನೊಡನೆ ಕೂಡಿಕೊಳ್ಳುತ್ತಾನೆ. —೫

,, ತೇಜಸ್ಸೆಂಬ ಮಾತಿನಿಂದ ಶ್ರುತಿಸ್ಮೃತಿಗಳು ಪಂಚಮಹಾಭೂತಗಳನ್ನು ಹೇಳುತ್ತವೆ. —೬

೪ ಜ್ಞಾನಿಗಳ ಹೊರತು ಉಳಿದವರೆಲ್ಲ ಶರೀರದಿಂದ ಹೊರಬೀಳುವರು (೭)

,, ಲಿಂಗಶರೀರದೊಳಗಣ ಭೂತಗಳು, ಇಂದ್ರಿಯಗಳು, ಮನಸ್ಸು, ಪ್ರಾಣ, ಜೀವ–ಇವರೆಲ್ಲ ಹೃದಯಕಮಲದಲ್ಲಿ ಒಂದುಗೂಡುವದೆ ಸಾವಿನ ರೀತಿ. ಇದು ನಿರ್ಗುಣಬ್ರಹ್ಮವನ್ನು ಸಾಕ್ಷಾತ್ಕಾರಮಾಡಿ

ಕೊಂಡಡವರಿಗೂ ಸಗುಣಬ್ರಹ್ಮವನ್ನು ಉಪಾಸನೆಮಾಡುವವರಿಗೂ ಕರ್ಮಿಗಳಿಗೂ ಎಲ್ಲರಿಗೂ ಒಂದೆ. ಚತುರಂಗಬಲದಿಂದ ಕೂಡಿದ ರಾಜನು ನರಕವನ್ನೂ ಸ್ವರ್ಗವನ್ನೂ ಬ್ರಹ್ಮಲೋಕವನ್ನೂ ನೋಡಬೇಕೆಂದು ಹೊರಟಂತೆ ಸಾಮಾನ್ಯರೂ ಕರ್ಮಿಗಳೂ ಉಪಾಸಕರೂ ಆದ ಜೀವರು ತಮ್ಮ ತಮ್ಮ ದಾರಿಯನ್ನು ಹಿಡಿಯುವರು. ಇವರು ನಾಡಿಗಳ ಮೂಲಕ ದೇಹವೆಂಬ ಪಟ್ಟಣದ ಹೊರಕ್ಕೆ ಕಾಲಿಡುವರು. ಈ ಹೊರಕ್ಕೆ ಹೋಗುವಿಕೆಯು ಮಾತ್ರ ಜ್ಞಾನಿಗಳಿಗಿಲ್ಲ. ಸಾವಿನ ರೀತಿಯು ಮಾತ್ರ ಅವರಿಗೂ ಅದೆ. ಉಪಾಸಕರಿಗೆ ಅಜ್ಞಾನವು ಪೂರ್ತಿಯಾಗಿ ಹೋಗದಿರುವದರಿಂದಲೂ ಅವರು ಲೋಕಾಂತರದಲ್ಲಿ ಫಲವನ್ನನುಭವಿಸಬೇಕಾಗಿರುವದರಿಂದಲೂ ಅವರು ದಾರಿಯನ್ನು ಹಿಡಿಯಬೇಕಾಗುವದು. —೭

೫ ಲಿಂಗಶರೀರವು ಎದ್ದು ಕಾಣದಿದ್ದರೆ ಸ್ಥೂಲಶರೀರಕ್ಕೆ ಬಾಧೆ ತಿಳಿಯುವದಿಲ್ಲ (೮..೧೧)

ಸಿ— ಉಪಾಸಕರ ಲಿಂಗಶರೀರವು ಹೃದಯಕಮಲವೆಂಬ ಮಸುಕಿನೊಳಗಣ ಬ್ರಹ್ಮದಲ್ಲಿಯೇ ಒಂದಾಗಿ ಕಾರಣರೂಪದಲ್ಲಿರುವದು. ಆಮೇಲೆ ಅದು ಅವರ ಕರ್ಮಕ್ಕನುಗುಣವಾಗಿ ಬೇರೆ ಶರೀರದಲ್ಲಿ ಎದ್ದುಕೊಳ್ಳುವದು. —೮

,, ಲಿಂಗಶರೀರವು ನಾಡಿಯಲ್ಲಿ ಸಂಚರಿಸುವದರಿಂದ ಬಹು ಸೂಕ್ಷ್ಮವಾಗಿರುವದು. ಅದು ಹೊರಬಿದ್ದದ್ದು ಹೊರಗಣವರಿಗೆ ಕಾಣುವದಿಲ್ಲ. ಏಕೆಂದರೆ ಅದು ಇಂದ್ರಿಯಗಳಿಗೆ ಗೋಚರವಾಗತಕ್ಕದ್ದಲ್ಲ. —೯

,, ಲಿಂಗಶರೀರವು ಸೂಕ್ಷ್ಮವಾಗಿರುವದರಿಂದಲೆ ಸ್ಥೂಲಶರೀರಕ್ಕೆ ಧಕ್ಕೆ ಹತ್ತಿದರೂ ಅದಕ್ಕೆ ಧಕ್ಕೆ ಹತ್ತುವದಿಲ್ಲ. —೧೦

,, ಲಿಂಗಶರೀರವಿದ್ದರೇನೆ ಸ್ಥೂಲದೇಹದಲ್ಲಿ ಬಿಸಿ ಕಾಣುವದು. ಸತ್ತಮೇಲೆ ಮೈ ಎಲ್ಲ ತಣ್ಣಗಾಗುವದರಿಂದ ಲಿಂಗಶರೀರವು ಹೋಯಿತೆಂದು ತಿಳಿಯಬೇಕು. —೧೧

೬ ಜ್ಞಾನಿಗಳ ಲಿಂಗಶರೀರವು ಹೊರಬೀಳುವದಿಲ್ಲ (೧೨..೧೪)

ಪೂ— ಜ್ಞಾನಿಯ ಪ್ರಾಣಗಳು ಹೊರಬೀಳುವದಿಲ್ಲವೆಂಬ ಶ್ರುತಿಯ ಮಾತಿಗೆ ಆ ಜೀವವನ್ನು ಬಿಟ್ಟು ಪ್ರಾಣಗಳು ಹೋಗುವದಿಲ್ಲವೆಂದರ್ಥ

ವಾಗುತ್ತದೆ. ಇದರಿಂದ ಆ ಜೀವನೊಡನೆ ಪ್ರಾಣಗಳು ಹೊರಬೀಳುವವೆಂದಾಯಿತು ಒಟ್ಟಿನ ಮೇಲೆ ಲಿಂಗಶರೀರವು ಜೀವನನ್ನು ಬಿಟ್ಟು ಸ್ವತಂತ್ರವಾಗಿ ತಾನೆ ಹೊರಬೀಳುವದಿಲ್ಲವೆಂದು ತಿಳಿಯಬೇಕು. —೧೨

ಸಿ— ಜ್ಞಾನಿಯ ಪ್ರಾಣಗಳು ದೇಹದಿಂದ ಹೊರಬೀಳುವದಿಲ್ಲವೆಂದು ಶ್ರುತಿ ಸ್ಪಷ್ಟವಾಗಿ ಹೇಳಿದೆ. ಅಜ್ಞಾನಿಯ ಪ್ರಾಣಗಳು ಹೊರಬೀಳುವವೆಂದು ಹೇಳಿ ಆಮೇಲೆ ಜ್ಞಾನಿಯ ವಿಷಯವನ್ನೆತ್ತಿ ಅವನ ಪ್ರಾಣಗಳೂ ಹೊರಬೀಳುವವೆಂದರೆ ಅಸಮಂಜಸವಾಗುವದು. —೧೩

,, ಜ್ಞಾನಿಗಳ ಲಿಂಗಶರೀರವು ಹೊರಬೀಳುವದಿಲ್ಲವೆಂದು ಸ್ಮೃತಿಗಳು ಹೇಳುತ್ತವೆ. —೧೪

೭ ಜ್ಞಾನಿಗಳ ಲಿಂಗಶರೀರವು ಪರಮಾತ್ಮನಲ್ಲಿ ಒಂದಾಗುವದು (೧೫)

,, ಜ್ಞಾನಿಗಳ ಲಿಂಗಶರೀರವು ಪರಮಾತ್ಮನಲ್ಲಿ ಒಂದಾಗಿಹೋಗುವದು. ಹೀಗೆ ಶ್ರುತಿಯು ಅನೇಕ ಕಡೆ ಹೇಳಿದೆ. —೧೫

೮ ಜ್ಞಾನಿಗಳ ಲಿಂಗಶರೀರವು ಎಷ್ಟು ಮಾತ್ರವೂ ಇಲ್ಲದೆ ಹೋಗುವದು (೧೬)

,, ಜ್ಞಾನಿಗಳ ಲಿಂಗಶರೀರವು ತನ್ನ ಸೆಲೆ ಇಲ್ಲದಂತೆ ಹೋಗಿಬಿಡುತ್ತದೆ. ಏಕೆಂದರೆ ಅದು ಅವಿದ್ಯೆಯಿಂದ ಹುಟ್ಟಿದ್ದು. ಜ್ಞಾನದಿಂದ ಅವಿದ್ಯೆ ಹೋಗುವದೆಂದು ಶ್ರುತಿ ಇರುವವರಿಂದ ಅವಿದ್ಯೆಯಿಂದ ಹುಟ್ಟಿನ ಲಿಂಗಶರೀರವು ಎಷ್ಟುಮಾತ್ರವೂ ಇಲ್ಲದೆ ಹೋಗುವದು. —೧೬

೯ ಸಗುಣೋಪಾಸಕರ ಲಿಂಗಶರೀರವು ಸುಷುಮ್ನಾನಾಡಿಯಿಂದ ಹೊರಬೀಳುವದು (೧೭)

,, ಪ್ರಾಣ, ಇಂದ್ರಿಯ—ಮೊದಲಾದವುಗಳಿಂದ ಕೂಡಿದ ಸಗುಣೋಪಾಸಕರಿಗೆ ಹೃದಯಕಮಲದ ಮೇಲುಗಡೆ ಬೆಳಕುಂಟಾಗುವದು. ಆಗ ಅದು ಅರಳುವದು. ಆಗ ಅವನಿಗೆ ದೇವಯಾನದ ದಾರಿಯು ಕಾಣುವದು. ಅವನು ಸುಷುಮ್ನಾನಾಡಿಯ ಮೂಲಕ ದೇಹದಿಂದ ಹೊರಬೀಳುವನು. ಹೃದಯಕಮಲವು ಮೇಲುಗಡೆ ಅರಳುವದಕ್ಕೆ ಸಗುಣಬ್ರಹ್ಮೋಪಾಸನೆಯ ಸಾಮರ್ಥ್ಯವೂ ಅದರ ಅಂಗವಾದ ದೇವಯಾನಮಾರ್ಗದ ಚಿಂತನೆಯ ಪ್ರಭಾವವೂ ಕಾರಣವಾಗಿರುವವು. ಆ ಸಮಯದಲ್ಲಿ ಅವನಿಗೆ ಹೃದಯಕಮಲದಲ್ಲಿರುವ ಸಗುಣಬ್ರಹ್ಮನ ಪ್ರೇರಣೆ

ಯಾಗುವದು. ಅದರಂತೆ ಅವನು ನೂರು ಮುಖ್ಯವಾದ ನಾಡಿಗಳಿಗಿಂತ ಬೇರೆಯಾದ ನೂರೊಂದನೆಯ ಸುಷುಮ್ನಾನಾಡಿಯಿಂದ ದೇಹದಿಂದ ಹೊರಬೀಳುವನು. ಆ ಸುಷುಮ್ನಾನಾಡಿಯು ನಡುನೆತ್ತಿಯವರೆಗೂ ಹೋಗಿರುವದು. ಅದರಿಂದ ಹೊರಬಿದ್ದ ಉಪಾಸಕನು ಬ್ರಹ್ಮಲೋಕವನ್ನು ಪಡೆಯುತ್ತಾನೆ. ಹೃದಯಕಮಲದ ನಾಲ್ಕು ದಿಕ್ಕುಗಳಲ್ಲಿಯೂ ಇರುವ ಬೇರೆ ನಾಡಿಗಳು ಕರ್ಮಿಗಳು ಹೊರಬೀಳುವ ದಾರಿಗಳಾಗಿರುವವು. —೧೭

### ೧೦ ಉಪಾಸಕನು ಸೂರ್ಯಕಿರಣಗಳನ್ನು ಹಿಡಿದುಕೊಂಡು ಬ್ರಹ್ಮಲೋಕಕ್ಕೆ ಹೋಗುತ್ತಾನೆ (೧೮ . . ೧೯)

ಸಿ— ಸುಷುಮ್ನಾನಾಡಿಯಿಂದ ಹೊರಬಿದ್ದ ಉಪಾಸಕನು ನಾಡಿಗಳಿಗೆ ತಗಲಿಕೊಂಡಿರುವ ಸೂರ್ಯಕಿರಣಗಳನ್ನು ಹಿಡಿದುಕೊಂಡು ಅದರ ಮೂಲಕ ಬ್ರಹ್ಮಲೋಕಕ್ಕೆ ಹೋಗುತ್ತಾನೆ. —೧೮

ಪೂ—ಹಗಲು ಸತ್ತ ಉಪಾಸಕನಿಗೆ ಹಾಗಾಗಬಹುದು. ರಾತ್ರಿನಾಡಿಯುಲ್ಲಿ ಗಳಿಗೆ ಸೂರ್ಯಕಿರಣಗಳು ತಗಲಿಕೊಂಡಿರುವ ಸಂಭವವಿಲ್ಲದ್ದರಿಂದ ಆಗ ಸತ್ತವರಿಗೆ ಬ್ರಹ್ಮಲೋಕವು ಸಿಕ್ಕಲಾರದು. —೧೯

ಸಿ— ಹಾಗಲ್ಲ. ನಾಡಿಗಳಿಗೂ ಸೂರ್ಯಕಿರಣಗಳಿಗೂ ಸಂಬಂಧವು ದೇಹವಿರುವ ತನಕ ಯಾವಾಗಲೂ ಇದ್ದೇ ಇರುವದು. ಈ ಅಭಿಪ್ರಾಯವನ್ನು ಶ್ರುತಿ ಹೇಳಿದೆ. ರಾತ್ರಿಯಲ್ಲಿ ಸೂರ್ಯನಿಗೆ ಮೇರುಪರ್ವತವು ಅಡ್ಡವಾಗಿರುವದರಿಂದ ನಮಗೆ ಪ್ರತ್ಯಕ್ಷವಾಗಿ ಕಾಣುವದಕ್ಕೆ ತಕ್ಕ ಸೂರ್ಯಕಿರಣಗಳಿಲ್ಲದಿದ್ದರೂ ಇಂದ್ರಿಯಗಳಿಗೆ ಗೋಚರವಾಗದ ಸೂರ್ಯಕಿರಣಗಳು ರಾತ್ರಿಯಲ್ಲಿಯೂ ಉಂಟೇ ಉಂಟು. ಇಲ್ಲದಿದ್ದರೆ ಗ್ರೀಷ್ಮರ್ತುವಿನ ರಾತ್ರಿಗಳಲ್ಲಿ ಸೆಕೆ ಮೊದಲಾದವು ಇರುತ್ತಲೇ ಇರಲಿಲ್ಲ. —೧೯

### ೧೧ ಉಪಾಸಕನು ಯಾವಾಗ ಸತ್ತರೂ ಬ್ರಹ್ಮಲೋಕಕ್ಕೇ ಹೋಗುತ್ತಾನೆ (೨೦ . . ೨೧)

,, ಆದ್ದರಿಂದ ರಾತ್ರಿಯಲ್ಲಿ ಸತ್ತ ಉಪಾಸಕನಿಗೂ ಬ್ರಹ್ಮಲೋಕವು ದೊರೆಯುತ್ತದೆ. ಇದೇ ಕಾರಣದಿಂದ ದಕ್ಷಿಣಾಯನದಲ್ಲಿ ಸತ್ತರೂ ಬ್ರಹ್ಮಲೋಕವು ಸಿಕ್ಕುತ್ತದೆ; ಕೃಷ್ಣಪಕ್ಷದಲ್ಲಿ ಸತ್ತರೂ ಸೂರ್ಯಕಿರಣಗಳ ಮೂಲಕ ಅರ್ಚಿರಾದಿಮಾರ್ಗದಿಂದ ಅವನು ಬ್ರಹ್ಮಲೋಕಕ್ಕೆ ಸೇರಿಯೇ ಸೇರುತ್ತಾನೆ. —೨೦

ಸಿ— ಸ್ಮೃತಿಗಳಲ್ಲಿ ಹೇಳಿರತಕ್ಕ ಈ ಉತ್ತರಾಯಣ, ದಕ್ಷಿಣಾಯನ– ಎಂಬ ದಾರಿಗಳು ಪ್ರಾಣಾಯಾಮ ಮೊದಲಾದ ಯೋಗವನ್ನು ಅಭ್ಯಾಸ ಮಾಡುವವರಿಗೆ ಹೇಳಿದ ಮಾತುಗಳೆ ಹೊರತು ಸಗುಣೋಪಾಸಕರಿಗೂ ಕರ್ಮಿಗಳಿಗೂ ಹೇಳಿದ ಮಾತಲ್ಲ. ಯೋಗಾಭ್ಯಾಸಿಗಳು ದಕ್ಷಿಣಾಯನ ಕಾಲದಲ್ಲಿ ಸತ್ತರೆ ಸ್ವರ್ಗವುದೊರೆಯುತ್ತದೆ; ಉತ್ತರಾಯಣದಲ್ಲಿ ಸತ್ತರೆ ಬ್ರಹ್ಮಲೋಕವು ದೊರೆಯುತ್ತದೆ. ಉಪಾಸಕರೂ ಕರ್ಮಿಗಳೂ ಯಾವ ಕಾಲದಲ್ಲಿ ಸತ್ತರೂ ಉಪಾಸಕರಿಗೆ ಬ್ರಹ್ಮಲೋಕ; ಕರ್ಮಿಗಳಿಗೆ ಸ್ವರ್ಗ ಲೋಕ. ನಿಜವಾಗಿ ನೋಡಿದರೆ ಅವು ಕಾಲವನ್ನು ಹೇಳುವ ಮಾತುಗಳೇ ಅಲ್ಲ; ಅಭಿಮಾನಿದೇವತೆಗಳ ಪರವಾಗಿ ಅಲ್ಲಿ ಅರ್ಥವನ್ನು ಮಾಡ ಬೇಕು. —೨೧

## ಪಾದ ೩

### ಉತ್ತರದ ದಾರಿಯ ಪ್ರಯಾಣ

#### ೧ ಉಪಾಸಕರ ಅರ್ಚಿರಾದಿಮಾರ್ಗ (೧)

,, ಉಪಾಸಕರು ಅರ್ಚಿರಾದಿಮಾರ್ಗದಿಂದ ಎಂದರೆ ಅರ್ಚಿ, ಹಗಲು, ಶುಕ್ಲಪಕ್ಷ, ಉತ್ತರಾಯಣ, ಸಂವತ್ಸರ, ಆದಿತ್ಯ; ಚಂದ್ರ, ವಿದ್ಯುತ್– ಈ ಲೋಕಗಳ ಮಾರ್ಗವಾಗಿ ಸಾಗಿ ಆಮೇಲೆ ಅಮಾನವ ಪುರುಷನ ಸಹಾಯದಿಂದ ಬ್ರಹ್ಮಲೋಕಕ್ಕೆ ಹೋಗುತ್ತಾರೆ. ಇದು ಛಾಂದೋಗ್ಯಶ್ರುತಿಯ ಅಭಿಪ್ರಾಯ. —೧

#### ೨ ಸಂವತ್ಸರಲೋಕವಾದ ಮೇಲೆ ವಾಯುಲೋಕ (೨)

ಪೂ— ಬೃಹದಾರಣ್ಯಕಶ್ರುತಿಯಲ್ಲಿ ಅವನು ವಾಯುಲೋಕವನ್ನೂ ವರುಣಲೋಕವನ್ನೂ ಇಂದ್ರಲೋಕವನ್ನೂ ಪ್ರಜಾಪತಿಲೋಕವನ್ನೂ ಕುರಿತು ತೆರಳುವನೆಂದು ನಾಲ್ಕು ಹೇಳಿವೆಯಲ್ಲ! ಅವುಗಳನ್ನೆಲ್ಲಿ ಸೇರಿಸಬೇಕು?

ಸಿ— ಸಂವತ್ಸರಲೋಕದ ಮೇಲೆ ವಾಯುಲೋಕವನ್ನು ಹೇಳಬೇಕು. ಏಕೆಂದರೆ ಉಪಾಸಕರಿಗೆ ವಾಯು ಸೂರ್ಯಮಂಡಲವಲ್ಲಿ ನಡುವೆ ದಾರಿಯನ್ನು ಮಾಡಿಕೊಡುವದೆಂದು ಹೇಳಿರುವದರಿಂದ ಸಂವತ್ಸರಕ್ಕೂ ಆದಿತ್ಯನಿಗೂ ನಡುವೆ ವಾಯುವನ್ನು ಹೇಳಬೇಕೆಂದು ಗೊತ್ತಾಗುವದು. —೨

೩ ವಿದ್ಯುಲ್ಲೋಕವಾದ ಮೇಲೆ ವರುಣಲೋಕ (೩)

,, ವಿದ್ಯುಲ್ಲೋಕವಾದ ಮೇಲೆ ವರುಣಲೋಕವನ್ನು ಹೇಳಬೇಕು. ಏಕೆಂದರೆ ಅವುಗಳಿಗೆ ಒಂದಕ್ಕೊಂದಕ್ಕೆ ಸಂಬಂಧವಿದೆ. ಮಿಂಚಿದ ಮೇಲೆ ಮಳೆ ಬರುವದಕ್ಕೆ ಅದೇ ಕಾರಣ. ಇನ್ನು ಉಳಿದ ಇಂದ್ರಲೋಕವನ್ನೂ ಪ್ರಜಾಪತಿಲೋಕವನ್ನೂ ಕೊನೆಗೆ ಹೇಳಬಹುದು. ಏಕೆಂದರೆ ವರುಣಲೋಕದಿಂದ ಇಂದ್ರಲೋಕ ಆಮೇಲೆ ಪ್ರಜಾಪತಿಲೋಕ. —೩

೪ ಅರ್ಚಿ ಮೊದಲಾದ ಬೇರೆಬೇರೆ ದೇವತೆಗಳು ಉಪಾಸಕರನ್ನು ಕರೆದುಕೊಂಡು ಹೋಗುವವರು (೪ . . ೬)

,, ಈ ಅರ್ಚಿರಾದಿ ಲೋಕಗಳಲ್ಲಿ ಹಿಂದಹಿಂದಿನ ಲೋಕದ ದೇವತೆಗಳು ಮುಂದಮುಂದಿನ ಲೋಕಗಳ ತನಕ ಆ ಉಪಾಸಕರಿಗೆ ನೆರವಾಗಿ ಕರೆದುಕೊಂಡು ಹೋಗುವರು. ವಿದ್ಯುಲ್ಲೋಕವನ್ನು ಪಡೆದ ಮೇಲೆ ಅಮಾನವನಾದ ಪುರುಷನು ಕರೆದುಕೊಂಡು ಹೋಗುವನೆಂದಿರುವದರಿಂದ ಹಿಂದಿನ ಲೋಕಗಳವರು ಕೂಡ ಕರೆದುಕೊಂಡು ಹೋಗತಕ್ಕವರೆಂದು ತಿಳಿಯಬೇಕು. —೪

,, ಉಪಾಸರಿಗೆ ಬ್ರಹ್ಮಲೋಕಕ್ಕೆ ಹೋಗುವತನಕ ಸ್ಥೂಲಶರೀರವಿರುವದಿಲ್ಲವಾದ್ದರಿಂದಲೂ ಅವರ ಜ್ಞಾನೇಂದ್ರಿಯಗಳಿಗೆ ದಾರಿಯನ್ನು ತಿಳಿಯುವ ಸಾಮರ್ಥ್ಯವಿರುವದಿಲ್ಲವಾದ್ದರಿಂದಲೂ ಅವರ ಕರ್ಮೇಂದ್ರಿಯಗಳಿಗೆ ಅಲುಗುವ ಸಾಮರ್ಥ್ಯವಿಲ್ಲದ್ದರಿಂದಲೂ ಅವರನ್ನು ಕರೆದುಕೊಂಡು ಹೋಗುವ ದೇವತೆಗಳಿಂದಲೇ ಅವರು ಮುಂದೆ ಸಾಗುವರೆಂದು ಹೇಳಬೇಕು. —೫

,, ವಿದ್ಯುಲ್ಲೋಕವನ್ನು ಪಡೆಯುವ ಹೊತ್ತಿಗೆ ಅಲ್ಲಿಗೆ ಬ್ರಹ್ಮಲೋಕದಿಂದ ಒಬ್ಬ ಅಮಾನವಪುರುಷನು ಬಂದಿರುತ್ತಾನೆ. ಅವನು ಉಪಾಸ

ಕರನ್ನು ಬ್ರಹ್ಮಲೋಕಕ್ಕೆ ಕರೆದುಕೊಂಡು ಹೋಗುತ್ತಾನೆ. ಆದ್ದರಿಂದ ವರುಣಲೋಕಕ್ಕೂ ಇಂದ್ರಲೋಕಕ್ಕೂ ಪ್ರಜಾಪತಿಲೋಕಕ್ಕೂ ಕರೆದು ಕೊಂಡು ಹೋಗತಕ್ಕವರು ಬೇರೆ ಬೇಕಾಗಿಲ್ಲ. —೬

೫ ಉಪಾಸಕರು ಹಿರಣ್ಯಗರ್ಭನನ್ನು ಪಡೆಯುವರು (೭ . . ೧೪)

ಸಿ— ಪರಬ್ರಹ್ಮನಿಂದ ಹುಟ್ಟಿದವನಾಗಿಯೂ ಹಿರಣ್ಯಗರ್ಭನೆಂಬ ಹೆಸರುಳ್ಳವನಾಗಿಯೂ ಇರುವ ಕಾರ್ಯಬ್ರಹ್ಮನನ್ನು ಸಗುಣೋಪಾಸಕರು ಪಡೆಯುವರೆಂದು ಬಾದರಿಗಳ ಅಭಿಪ್ರಾಯ. ಏಕೆಂದರೆ ಹೀಗಾದರೆ ಉಪಾಸಕನು ಪ್ರಯಾಣಮಾಡಿದ್ದು ಸಾರ್ಥಕವಾಗುತ್ತದೆ. ಪರಬ್ರಹ್ಮನು ಆಕಾಶದಂತೆ ಎಲ್ಲೆಲ್ಲಿಯೂ ತುಂಬಿರುವದರಿಂದ ಅವನನ್ನು ಪಡೆಯುವದಕ್ಕೆ ದಾರಿಯಲ್ಲಿ ಮುಂದುವರಿಯಬೇಕಾದದ್ದಿರುವದಿಲ್ಲ. —೭

,, ಉಪಾಸಕರಿಗೆ ಬ್ರಹ್ಮಲೋಕವು ಸಿಕ್ಕುವದೆಂದು ಅದರ ಲಕ್ಷಣಗಳನ್ನು ವಿವರಿಸಿ ಹೇಳಿರುವದರಿಂದ ಅವರು ಬ್ರಹ್ಮವನ್ನು ಪಡೆಯುತ್ತಾರೆಂದರೆ ಅಲ್ಲಿರುವ ಹಿರಣ್ಯಗರ್ಭನೆಂಬ ಕಾರ್ಯಬ್ರಹ್ಮನನ್ನು ಪಡೆಯುತ್ತಾರೆಂದರ್ಥ. ಅವನನ್ನು ಪಡೆಯುವದೆಂದರೆ ಅವನ ಭೋಗಕ್ಕೆ ಸಮಾನವಾದ ಎಲ್ಲ ಭೋಗಗಳಿಂದ ಕೂಡಿದವರಾಗಿ ಅವನ ಹತ್ತಿರ ಇರುವರೆಂದರ್ಥ. —೮

ಪೂ— ಬ್ರಹ್ಮಶಬ್ದಕ್ಕೆ ಪರಬ್ರಹ್ಮವೆಂಬುದು ಮುಖ್ಯಾರ್ಥವಾಗಿರುವಾಗ ಅದಕ್ಕೆ ಹಿರಣ್ಯಗರ್ಭನೆಂಬರ್ಥವನ್ನು ಮಾಡುವದು ಹೇಗೆ ?

ಸಿ— ಹಿರಣ್ಯಗರ್ಭನು ಪರಬಹ್ಮನಿಂದ ಹುಟ್ಟಿದವರಲ್ಲಿ ಮೊದಲನೆಯವನು. ಆದ್ದರಿಂದ ಅವನನ್ನು ಬ್ರಹ್ಮವೆನ್ನಲಾಗಿರುವದು. —೯

ಪೂ— ಬ್ರಹ್ಮಲೋಕಕ್ಕೆ ಹೋದವರಿಗೆ ಯಾವಾಗ ಮೋಕ್ಷ ?

ಸಿ— ಮಹಾಪ್ರಲಯವಾದಾಗ ಬ್ರಹ್ಮಲೋಕವು ನಾಶವಾಗುತ್ತದೆ. ಆಗ ಅದರ ಒಡೆಯನಾಗಿದ್ದ ಹಿರಣ್ಯಗರ್ಭನೊಡನೆ ಉಪಾಸಕರು ಹಿರಣ್ಯಗರ್ಭನಿಗಿಂತ ಮೇಲಾದದ್ದಾದ ಪರಬ್ರಹ್ಮವನ್ನು ಪಡೆಯುತ್ತಾರೆಂದು ಶ್ರುತಿ ಹೇಳುತ್ತದೆ. —೧೦

,, ಈ ಅಭಿಪ್ರಾಯವನ್ನು ಸ್ಮೃತಿಯೂ ಅನುವಾದ ಮಾಡಿದೆ. —೧೧

ಪೂ-— ಬ್ರಹ್ಮಶಬ್ದಕ್ಕೆ ಪರಬ್ರಹ್ಮವೆಂದೇ ಅರ್ಥವೆಂದು ಜೈಮಿನಿಗಳ ಅಭಿಪ್ರಾಯ. ಏಕೆಂದರೆ ಆ ಶಬ್ದಕ್ಕೆ ಅದೇ ಮುಖ್ಯವಾದ ಅರ್ಥ. ಅದನ್ನು ಬಿಟ್ಟು ಹಿರಣ್ಯಗರ್ಭನೆಂಬ ಗೌಣಾರ್ಥವನ್ನೇಕೆ ಮಾಡಬೇಕು ? —೧೨

,, ಬ್ರಹ್ಮಶಬ್ದಕ್ಕೆ ಪರಬ್ರಹ್ಮವೆಂದೇ ಪ್ರಯೋಗವೂ ಕಂಡು ಬಂದಿದೆ. —೧೩

,, ಉಪಾಸಕರು ಹಿರಣ್ಯಗರ್ಭನನ್ನು ಪಡೆಯುವರೆಂಬ ಮಾತೇ ಒಪ್ಪುವದಿಲ್ಲ. ಬ್ರಹ್ಮಲೋಕ ಮೊದಲಾದ ಶಬ್ದಗಳಿಗೆ ಕೂಡ ಲಕ್ಷಣೆಯಿಂದ ಪರಬ್ರಹ್ಮವೆಂದೇ ಅರ್ಥವನ್ನು ಮಾಡುವದಕ್ಕಾಗುತ್ತದೆ. ಪ್ರಜಾಪತಿಯ ಸಭಾಂಗಣವನ್ನು ಪಡೆಯುತ್ತಾನೆಂದು ಮುಂತಾಗಿರುವ ಮಾತುಗಳು ಹಿರಣ್ಯಗರ್ಭನ ಮನೆಯನ್ನು ಹೇಳುವದಕ್ಕೆ ಹೊರಟವುಗಳಲ್ಲ. ಇದು ನಾಮರೂಪಗಳ ಸೋಂಕಿಲ್ಲದ ಪರಮಾತ್ಮನ ಪ್ರಕರಣ. —೧೪

ಸಿ— ಹಿಂದೆಯೇ ಮೊದಲನೇ ಐದು ಸೂತ್ರಗಳಲ್ಲಿ ಇದರ ಸಮಾಧಾನವಿದೆ.

### ೬ ಪ್ರತಿನಿಧಿಯನ್ನಿಟ್ಟುಕೊಳ್ಳದೆ ಬ್ರಹ್ಮವನ್ನು ಧ್ಯಾನಿಸಿದವರಿಗೆ ಬ್ರಹ್ಮಲೋಕ (೧೫ . . ೧೬)

,, ಬ್ರಹ್ಮಕ್ಕೆ ಪ್ರತಿನಿಧಿಯಾಗಿ ಏನನ್ನಾದರೂ ಇಟ್ಟುಕೊಂಡ ಉಪಾಸಕರನ್ನು ಬಿಟ್ಟು ತಾನು ಧ್ಯಾನಿಸುವ ವಸ್ತು ತನ್ನ ಸ್ವರೂಪವೆ ಎಂಬ ಉಪಾಸಕರನ್ನು ಮಾತ್ರ ಅಮಾನವಪುರುಷನು ಬ್ರಹ್ಮಲೋಕಕ್ಕೆ ಕರೆದುಕೊಂಡು ಹೋಗುವನೆಂದು ಬಾದರಿಗಳ ಅಭಿಪ್ರಾಯ. ಇಬ್ಬರನ್ನೂ ಕರೆದುಕೊಂಡು ಹೋಗುವದಾದ ಪಕ್ಷದಲ್ಲಿ ಪ್ರತಿನಿಧಿಯನ್ನಿಟ್ಟುಕೊಂಡು ಮಾಡುವ ಸುಲಭವಾದ ಉಪಾಸನೆಗೆ ದೊರೆಯುವ ಫಲವೆ ತಾನು ಧ್ಯಾನಿಸುವ ವಸ್ತು ತನ್ನ ಸ್ವರೂಪವೇ ಎಂಬ ಕಷ್ಟಸಾಧ್ಯವಾದ ಉಪಾಸನೆಗೆ ದೊರೆಯುವದೆಂದಂತಾಗುತ್ತದೆ. ಆಗ ಅವರ ಹೆಚ್ಚಿನ ಕಷ್ಟಕ್ಕೆ ಫಲವಿಲ್ಲವಾಗುತ್ತದೆ. ಇದಲ್ಲದೆ ತಾನು ಧ್ಯಾನಿಸುವ ವಸ್ತು ತನ್ನ ಸ್ವರೂಪವೇ ಎಂಬ ಅಭಿಪ್ರಾಯದ ಅಭ್ಯಾಸದ ಬಲವುಳ್ಳವರಿಗೆ ಮಾತ್ರ ಸತ್ತಮೇಲೆ ಆ ವಸ್ತು ದೊರೆಯುವದು ಯೋಗ್ಯವೆಂದು ಶ್ರುತಿಯ ಅಭಿಪ್ರಾಯ. ಅದಕ್ಕೆ ಸ್ಮೃತಿಯ ಬೆಂಬಲವೂ ಇದೆ. ಮನೋಮಯತ್ವ, ಭಾರೂಪತ್ವ, ಸತ್ಯಸಂಕಲ್ಪತ್ವ–ಮೊದಲಾದ ಅನೇಕ ಗುಣಗಳಿಂದ

ಕೂಡಿದ ಬ್ರಹ್ಮವನ್ನು ತಾನೆಂದು ಧ್ಯಾನಿಸುವ ದಹರ, ಶಾಂಡಿಲ್ಯ, ಉಪಕೋಸಲ ಮತ್ತು ವೈಶ್ವಾನರ ಮೊದಲಾದ ವಿದ್ಯೆಗಳು ಕಷ್ಟಸಾಧ್ಯವಾದವುಗಳು. ಆದ್ದರಿಂದ ಅಂಥವರಿಗೆ ಮಾತ್ರ ಬ್ರಹ್ಮಲೋಕವು ದೊರೆಯುವದು. ಬುದ್ಧಿಜಾಡ್ಯದಿಂದ ನಾಮ ಮೊದಲಾದ ಪ್ರತಿನಿಧಿಗಳನ್ನು ಬ್ರಹ್ಮವೆಂದು ಧ್ಯಾನಿಸುವವರಿಗೆ ಬ್ರಹ್ಮಲೋಕದ ಕೆಳಗಣ ಮಹರ್ಲೋಕ ಮೊದಲಾದವು ದೊರೆತಾವು. —೧೫

ಸಿ— ನಿಜವಾದ ಬ್ರಹ್ಮವನ್ನು ಉಪಾಸನೆ ಮಾಡುವವರಿಗೆ ಮಾತ್ರ ಬ್ರಹ್ಮಲೋಕವು ದೊರೆತೀತೇ ಹೊರತು ಸುಳ್ಳಾದ ನಾಮ ಮೊದಲಾದವುಗಳನ್ನು ಬ್ರಹ್ಮವೆಂದು ನೋಡುವವರಿಗೆ ಅದು ಹೇಗೆ ದೊರೆತೀತು? —೧೬

---

## ಪಾದ ೪

### ಸಗುಣೋಪಾಸಕರಿಗೆ ಬ್ರಹ್ಮಲೋಕ ಮತ್ತು ನಿರ್ಗುಣಬ್ರಹ್ಮಜ್ಞಾನಿಗಳಿಗೆ ವಿದೇಹಮುಕ್ತಿ

#### ೧ ಜ್ಞಾನವಾಗುವಾಗ ಹೃದಯಕಮಲದಲ್ಲಿ ತನ್ನ ಸ್ವರೂಪವು ಎದ್ದು ಕಾಣುವದು (೧ . . ೩)

ಸಿ— ಮನಸ್ಸು ಮತ್ತು ಇಂದ್ರಿಯಗಳು ಮೊದಲಾದವುಗಳೊಳಗೆ ಸಿಕ್ಕಿಬಿದ್ದಿರುವ ಜೀವನು ಜ್ಞಾನದಿಂದ ಲಿಂಗಶರೀರದ ನಾಶವಾಗುತ್ತಲೆ ಹೃದಯಕಮಲದಲ್ಲಿ ಎಲ್ಲೆಲ್ಲಿಯೂ ತುಂಬಿರುವ ಬ್ರಹ್ಮವನ್ನು ಪಡೆಯುತ್ತಾನೆ. ಆಗ ಅವನಿಗೆ ತಾನು ಯಾವಾಗಲೂ ಇರುವವನೆಂದೂ ದೋಷದ ಸೋಂಕಿಲ್ಲದವನೆಂದೂ ಜ್ಞಾನಸ್ವರೂಪನೆಂದೂ ತನ್ನ ಸ್ವರೂಪವು ಎದ್ದು ಕಾಣುತ್ತದೆ. —೧

ಪೂ— ಜ್ಞಾನಿಗಳು ಕೂಡ ಶರೀರದಿಂದ ಹೊರಬೀಳುವರೆಂದು ಒಂದು ಶ್ರುತಿ ಇದೆಯಲ್ಲ! ಅವರಿಗೆ ಲಿಂಗಶರೀರವು ನಾಶವಾಗುತ್ತಲೆ ಅವರು ಹೃದಯಕಮಲದಲ್ಲಿರುವ ಬ್ರಹ್ಮವನ್ನು ಪಡೆಯುವರೆಂಬುದು ಹೇಗೆ?

ಸಿ— ಆ ಶ್ರುತಿಯಲ್ಲಿ ಶರೀರದಿಂದ ಹೊರಬೀಳುವದೆಂದರೆ ಶರೀರದ ಮೇಲಿನ ಅಭಿಮಾನವನ್ನು ಬಿಡುವದೆಂದರ್ಥ. ಏಕೆಂದರೆ ಒಡನೆ ತನ್ನ ನಿಜ ಸ್ವರೂಪವು ಎದ್ದು ಕಾಣುವದೆಂದು ಮುಂದಿನ ಮಾತಿದೆ. —೨

ಪೂ— ಶರೀರದಿಂದ ಹೊರಬಿದ್ದು ಹೆಚ್ಚಿನ ಜ್ಯೋತಿಯನ್ನು ಪಡೆಯುವ ರೆಂದಿರುವದರಿಂದ ಉಪಾಸಕರಂತೆ ಅವರೂ ಸೂರ್ಯಲೋಕದ ಮೂಲಕ ಬ್ರಹ್ಮಲೋಕಕ್ಕೆ ಹೋಗುವರೆಂದಾಗುವದಿಲ್ಲವೆ ?

ಸಿ— ಅಲ್ಲಿ ಹೆಚ್ಚಿನ ಜ್ಯೋತಿಯೆಂದರೆ ಪರಮಾತ್ಮನೆಂದೇ ಅರ್ಥ. ಏಕೆಂದರೆ ಅದು ಇಂದ್ರನೂ ವಿರೋಚನನೂ ಪರಮಾತ್ಮನ ವಿಷಯವನ್ನು ಕೇಳಿದ ಪ್ರಶ್ನೆಗೆ ಉತ್ತರವಾಗಿ ಹಿರಣ್ಯಗರ್ಭನು ಹೇಳಿರುವ ಮಾತಿನಲ್ಲಿದೆ. —೩

೨ ಜ್ಞಾನಿಗಳು ಬ್ರಹ್ಮವನ್ನು ಪಡೆಯುವರು (೪)

ಪೂ— ಹೆಚ್ಚಿನ ಜ್ಯೋತಿಯನ್ನು ಪಡೆಯುತ್ತಾನೆಂದರೆ ಬ್ರಹ್ಮವನ್ನು ಕಾಣುತ್ತಾನೆಂದಿಷ್ಟೇ ಅರ್ಥವಾದೀತೇ ಹೊರತು ಆ ಬ್ರಹ್ಮದೊಡನೆ ಒಂದಾಗುವನೆಂದಾಗುವದಿಲ್ಲವಲ್ಲ !

ಸಿ— ಜ್ಞಾನಿಗಳು ಬ್ರಹ್ಮದೊಡನೆ ಒಂದಾಗಿಯೇ ಇರುವರು. ಅವರು ಬ್ರಹ್ಮವೇ ಆಗುವರೆಂದು ಶ್ರುತಿ ಸ್ಪಷ್ಟವಾಗಿ ಹೇಳಿದೆ. —೪

೩ ಅವರಿಗೆ ಅದು ಧ್ಯಾನಕ್ಕೆ ತಕ್ಕ ಫಲ (೫ . . ೭)

ಪೂ— ಬ್ರಹ್ಮವನ್ನು ಹೇಳುವದಕ್ಕೆ ಹೊರಟಿರುವ ವಾಕ್ಯದಲ್ಲಿರುವದೆಂಬ ಬಲದ ಮೇಲೆ ಅಲ್ಲಿ ಪರಬ್ರಹ್ಮವೆಂದರ್ಥವಾದರೂ ಲಕ್ಷಣೆಯಿಂದ ನೋಡಿದರೆ ಲೀಲಾಶರೀರದಿಂದ ಕೂಡಿದ ಹಿರಣ್ಯಗರ್ಭನೆಂಬ ಸಗುಣ ಬ್ರಹ್ಮನೆ ಅಲ್ಲಿಯ ವಿಷಯವೆಂದು ತೋರುವದು. ಅದರಂತೆ ನೋಡಿದರೆ ಜ್ಞಾನಿಗಳಿಗೂ ಬ್ರಹ್ಮಲೋಕವು ದೊರತೀತೇ ಹೊರತು ಅವರು ಎಲ್ಲೆಲ್ಲಿಯೂ ತುಂಬಿರುವ ಬ್ರಹ್ಮವೇ ಆಗುವ ಸಂಭವವಿಲ್ಲವೆಂದು ಜೈಮಿನಿಗಳ ಅಭಿಪ್ರಾಯ. ಹೀಗೆ ಹೇಳುವದಕ್ಕೆ ಕಾರಣವೂ ಇದೆ. ಆ ಜ್ಞಾನಿಗಳು ಉಂಡುಕೊಂಡು ಆಡಿಕೊಂಡು ವಿನೋದಗೊಳ್ಳುತ್ತಿರುವರೆಂದು ಮುಂದೆ ಮಾತು ಬಂದಿದೆ. ಅವರು ನಿರ್ಗುಣಬ್ರಹ್ಮದಲ್ಲಿ ಒಂದಾದರೆ ಹಾಗೆಲ್ಲ ಆಗುವದು ಸಾಧ್ಯವಿಲ್ಲ. ಆದ್ದರಿಂದ ಹೆಚ್ಚಿನ ಜ್ಯೋತಿಯನ್ನು

ಪಡೆಯುವರೆಂಬ ಮಾತಿಗೆ ಲಕ್ಷಣೆಯಿಂದ ಹಿರಣ್ಯಗರ್ಭನನ್ನು ಪಡೆಯು ವರೆಂದೇ ಹೇಳಬೇಕು. ಇನ್ನು ಅವರಿಗೆ ಒಡನೆ ತಮ್ಮ ನಿಜಸ್ವರೂಪವು ಎದ್ದು ಕಾಣುವದೆಂಬ ಮಾತಿಗೆ ತಾವು ಹಿರಣ್ಯಗರ್ಭನಿಗೆ ಸಮಾನವಾದ ದೇಹದಿಂದ ಕೂಡಿ ಅವನ ಬಳಿಯಲ್ಲಿರುವಿಕೆಯು ಎದ್ದು ಕಾಣುವದೆಂದು ಹೇಳಿದರೆ ಸರಿಯಾಗುತ್ತದೆ. ಆದ್ದರಿಂದ ಜ್ಞಾನಿಗಳಿಗೂ ಉಪಾಸಕರಂತೆ ಬ್ರಹ್ಮಲೋಕವು ದೊರೆಯುವದೇ ಹೊರತು ಅವರು ಬ್ರಹ್ಮವೇ ಆಗಿ ಬಿಡುವದಿಲ್ಲ. ೫

ಸೂ— ನಿರ್ಗುಣಬ್ರಹ್ಮವೇ ತಾವೆಂಬ ಜ್ಞಾನಿಗಳು ಶುದ್ಧಚೈತನ್ಯಮಾತ್ರ ಸ್ವರೂಪದಿಂದ ನಿರ್ಗುಣಬ್ರಹ್ಮರೂಪರಾಗಿರುವರೆಂದು ಔಡುಲೋಮಿಗಳ ಅಭಿಪ್ರಾಯ. ಏಕೆಂದರೆ ಅವರು ಯಾವಾಗಲೂ ಶುದ್ಧಚೈತನ್ಯವನ್ನು ಧ್ಯಾನಮಾಡಿದವರಾಗಿರುವರು. ಅವರ ಧ್ಯಾನದ ಫಲವಾಗಿ ಅವರು ಶುದ್ಧಚೈತನ್ಯರೂಪರಾಗಿರುವರೆಂಬ ಮಾತು ಒಪ್ಪತಕ್ಕದ್ದು. —೬

,, ಅವರು ಉಂಡುಕೊಂಡು ಆಡಿಕೊಂಡು ವಿನೋದಗೊಳ್ಳುತ್ತಿರುವರೆಂಬ ಮಾತು ಅವರ ವ್ಯವಹಾರವನ್ನು ನೋಡಿ ಹೇಳಿದ್ದು. ಅವರು ಶುದ್ಧಚೈತನ್ಯರೆನ್ನುವದು ಅವರ ಪರಮಾರ್ಥಸ್ಥಿತಿಯನ್ನು ನೋಡಿ ಹೇಳಿದ್ದು. ಆದ್ದರಿಂದ ಅವುಗಳಿಗೆ ವಿರೋಧವಿಲ್ಲವೆಂದು ಬಾದರಾಯಣರ ಅಭಿಪ್ರಾಯ —೭

೪ ಉಪಾಸಕನು ಬ್ರಹ್ಮಲೋಕದಲ್ಲಿ ಸ್ವತಂತ್ರನಾಗಿರುವನು (೮..೯)

,, ಬ್ರಹ್ಮಲೋಕಕ್ಕೆ ಹೋದ ಉಪಾಸಕರಿಗೆ ಇಚ್ಛಾಮಾತ್ರದಿಂದ ಹೂ, ಗಂಧ, ಹೆಂಗಸು ಮೊದಲಾದ ಎಲ್ಲ ವಿಷಯಗಳೂ ದೊರೆಯುವವು. ಅವರಿಗೆ ಪಿತೃಗಳೂ ದೇವತೆಗಳೂ ಗಂಧರ್ವರೂ ಮೊದಲಾದವರು ಅಡಿಯಾಳುಗಳಂತೆ ಸೇವಕರಾಗಿರುವರೆಂದು ಶ್ರುತಿ ಹೇಳುವದು. —೮

,, ಆದ್ದರಿಂದ ಆ ಉಪಾಸಕನು ತನ್ನ ಮೇಲೆ ಆಳುವವನೊಬ್ಬನಿಲ್ಲದವನಾಗಿ ಸ್ವತಂತ್ರನಾಗಿರುವನು. —೯

೫ ಉಪಾಸಕರಿಗೆ ಅಲ್ಲಿ ಸ್ಥೂಲಶರೀರವಿರುವದೂ ಉಂಟು; ಸ್ಥೂಲಶರೀರವಿಲ್ಲದಾಗ ಕನಸಿನಂತೆ ಭೋಗ (೧೦..೧೪)

,, ಲಿಂಗಶರೀರಮಾತ್ರದಿಂದಿರುವ ಉಪಾಸಕರಿಗೆ ಸ್ಥೂಲಶರೀರವೆ

ಇಲ್ಲವೆಂದು ಬಾದರಿಗಳು ಹೇಳುತ್ತಾರೆ. ಈ ಅಭಿಪ್ರಾಯವು ಶ್ರುತಿಯಲ್ಲಿಯೂ ಹೊರಬೀಳುತ್ತದೆ. —೧೦

,, ಸ್ಥೂಲಶರೀರವಿರುವದೆಂದು ಜೈಮಿನಿಗಳ ಅಭಿಪ್ರಾಯ. ಬ್ರಹ್ಮಲೋಕಕ್ಕೆ ಹೋದ ಉಪಾಸಕರಿಗೆ ಸ್ಥೂಲಶರೀರವಿಲ್ಲದೆ ಬರೀ ಲಿಂಗಶರೀರದ ಮಾತ್ರದಿಂದ ಭೋಗವಾಗುವದಿಲ್ಲವೆಂದು ಬಹುಶ್ರುತಿಗಳು ಹೇಳಿವೆ. ಮನಸ್ಸಿನಿಂದಲೆ ತಮ್ಮ ಬಯಕೆಗಳನ್ನು ಕಾಣುತ್ತ ವಿನೋದದಿಂದಿರುವರೆಂಬ ಮಾತಿನಲ್ಲಿ ಮನಸ್ಸಿನಿಂದಲೆ ಎಂಬಲ್ಲಿರುವ ಅವಧಾರಣಕ್ಕೆ ಮನಸ್ಸಿನಿಂದ ಅನುಭವಿಸಿಯೇ ತೀರುವನೆಂದಿಟ್ಟುಕೊಳ್ಳಬೇಕು. —೧೧

,, ಎರಡು ದಿನಗಳ ಕ್ರತು ಅಹೀನವೆನಿಸುವದು. ಎರಡು ಮತ್ತು ಹೆಚ್ಚು ದಿನಗಳ ಕ್ರತು ಸತ್ರವೆನಿಸುವದು. ಆದರೆ ಹನ್ನೆರಡು ದಿನಗಳ ಕ್ರತುವಿನಲ್ಲಿ ಎರಡು ದಿನಗಳು ಅಧಿಕವಾಗಿರುವದರಿಂದ ಅದು ಅಹೀನವೂ ಎನಿಸುವದು; ಹೆಚ್ಚು ದಿನಗಳಿರುವದರಿಂದ ಸತ್ರವೂ ಎನಿಸುವದು. ಇದರಂತೆ ಅವರು ತಮ್ಮ ಅಮೋಘವಾದ ಇಚ್ಛಾಬಲದಿಂದ ಕೆಲವು ವೇಳೆ ಸ್ಥೂಲಶರೀರದಿಂದ ಕೂಡಿದವರಾಗಿಯೂ ಕೆಲವು ವೇಳೆ ಬರೀ ಲಿಂಗಶರೀರದವರಾಗಿಯೂ ಕಾಲಭೇದದಿಂದ ಎರಡು ವಿಧವಾಗಿಯೂ ಇರುವರೆಂದು ಬಾದರಾಯಣರ ಅಭಿಪ್ರಾಯ. —೧೨

ಪೂ— ಸ್ಥೂಲಶರೀರವಿಲ್ಲದಾಗ ಭೋಗವೆಂತಾಗುವದು?

ಸಿ— ಸ್ಥೂಲಶರೀರವಿಲ್ಲದ ಕಾಲದಲ್ಲಿ ಕನಸಿನಂತೆ ತೋರಿಕೆಯ ಭೋಗವಾಗುವದು. —೧೩

,, ಸ್ಥೂಲಶರೀರವಿರುವಾಗ ಎಚ್ಚರದಂತೆ ಭೋಗವಾಗುವದು. —೧೪

೬ ಉಪಾಸಕರಿಗೆ ಕೆಲವು ಕಾಲ ಬ್ರಹ್ಮಲೋಕದಲ್ಲಿ ಭೋಗಿಸಿದ ಮೇಲೆ ಮೋಕ್ಷ (೧೫..೧೬)

,, ಒಂದು ದೀಪವು ಎಣ್ಣೆಯಲ್ಲಿ ನೆನೆದ ಸಹಸ್ರಾರು ಬತ್ತಿಗಳಿಗೆ ಒಂದೇ ಕಾಲದಲ್ಲಿ ಪ್ರವೇಶ ಮಾಡುವಂತೆ ಬ್ರಹ್ಮಲೋಕದಲ್ಲಿರುವ ಉಪಾಸಕರು ತಮ್ಮ ಇಚ್ಛಾಬಲದಿಂದ ಒಂದೆ ಸಮಯದಲ್ಲಿ ಅನೇಕ

ಶರೀರಗಳನ್ನು ಹೊಂದಿ ಅವುಗಳಲ್ಲಿ ಪ್ರವೇಶಮಾಡುವರೆಂದು ಶ್ರುತಿಯು ಹೇಳುತ್ತದೆ. —೧೫

**ಪೂ**— ಸಗುಣಬ್ರಹ್ಮವನ್ನು ಉಪಾಸನೆ ಮಾಡಿದವರು ಅರ್ಚಿರಾದಿ ಮಾರ್ಗದಿಂದ ಬ್ರಹ್ಮಲೋಕವನ್ನು ಹೊಕ್ಕೊಡನೆ ಅವರಿಗೆ ತಾವು ಎಲ್ಲೆಲ್ಲಿಯೂ ತುಂಬಿರುವ ಬ್ರಹ್ಮಕ್ಕಿಂತ ಬೇರೆಯಲ್ಲವೆಂಬ ಅರಿವಾಗುವದರಿಂದ ಅವರು ನಿರ್ಗುಣಬ್ರಹ್ಮರೇ ಆದರಷ್ಟೆ. ಇನ್ನು ಅವರು ದೇಹಗಳನ್ನು ಹುಟ್ಟಿಸಿಕೊಳ್ಳುವದು ಹೇಗೆ?

**ಸಿ**— ಅವರು ನಿರ್ಗುಣಬ್ರಹ್ಮರೇ ಆಗುವರೆಂಬ ಮಾತು ಸುಪ್ತಾವಸ್ಥೆಯನ್ನೊ ಮೋಕ್ಷಾವಸ್ಥೆಯನ್ನೊ ಕುರಿತು ಹೇಳಿದ್ದು. ಉಪಾಸಕರು ಬ್ರಹ್ಮಲೋಕವನ್ನು ಪಡೆದೊಡನೆ ಎಲ್ಲೆಲ್ಲಿಯೂ ತುಂಬಿರುವ ಬ್ರಹ್ಮರಾಗುವರೆಂದು ಶ್ರುತಿಯ ಅಭಿಪ್ರಾಯವಲ್ಲ. ದೇಹ ಮೊದಲಾದವುಗಳ ಮೇಲಿನ ಅಭಿಮಾನವು ಹೋದಮೇಲೆ ಜೀವರು ಬ್ರಹ್ಮಕ್ಕಿಂತ ಬೇರೆಯಲ್ಲದವರಾಗುವರು. ಬ್ರಹ್ಮಲೋಕವನ್ನು ಪಡೆದ ಮಾತ್ರಕ್ಕೆ ದೇಹ ಮೊದಲಾದವುಗಳ ಮೇಲಿನ ಅಭಿಮಾನವು ಹೋಗುವದಿಲ್ಲ. ಅವರು ಕೆಲವು ಕಾಲ ಬ್ರಹ್ಮಲೋಕದಲ್ಲಿದ್ದು ಭೋಗಿಸಿದ ಮೇಲೆ ಅವರಿಗೆ ಬ್ರಹ್ಮಸಾಕ್ಷಾತ್ಕಾರವಾಗಿ ಅವರು ಹಿರಣ್ಯಗರ್ಭನೊಡನೆ ಪರಬ್ರಹ್ಮದಲ್ಲಿ ಒಂದಾಗುವರು. —೧೬

೭ ಉಪಾಸಕರು ದೇವತೆಗಳೆ ಮೊದಲಾದ ಶರೀರಗಳನ್ನು ಹುಟ್ಟಿಸಲಾರರು

(೧೭ . . ೨೨)

**ಪೂ**— ಉಪಾಸಕರು ಬೇಕುಬೇಕಾದಹಾಗೆ ದೇಹಗಳನ್ನು ಹುಟ್ಟಿಸಿಕೊಳ್ಳುವರೆಂದೊಪ್ಪಿದರೆ ದೇವತೆಗಳು, ಗಂಧರ್ವರು, ಮನುಷ್ಯರು, ಹಕ್ಕಿಗಳು—ಮೊದಲಾದ ಯಾವ ಶರೀರಗಳನ್ನಾದರೂ ಅವರು ಹುಟ್ಟಿಸುವವರಾಗಬಹುದೊ?

**ಸಿ**— ಅವರು ದೇವತೆಗಳು, ಗಂಧರ್ವರು—ಮೊದಲಾದ ದೇಹಗಳಿರುವ ಜಗತ್ತನ್ನು ಹುಟ್ಟಿಸುವ ಕೆಲಸವನ್ನು ಬಿಟ್ಟು ತಮ್ಮ ಭೋಗಕ್ಕೆ ಸಾಧನವಾದ ಶರೀರಗಳನ್ನು ಹುಟ್ಟಿಸಿಕೊಳ್ಳುವ ಸಾಮರ್ಥ್ಯವನ್ನು ಮಾತ್ರ ಹೊಂದಿರು

ವರು. ದೇವತೆಗಳು, ಗಂಧರ್ವರು-ಮೊದಲಾದ ಸೃಷ್ಟಿಯನ್ನು ಮಾಡು ವದು ಹಿರಣ್ಯಗರ್ಭನಿಗೆ ಮಾಸಲು. ಏಕೆಂದರೆ ಹಿರಣ್ಯಗರ್ಭನ ವಿಚಾರ ವನ್ನು ಹೇಳುವ ಪ್ರಕರಣದಲ್ಲಿ ಅವರ ಸೃಷ್ಟಿಯ ಮಾತು ಬಂದಿದೆ. ಉಪಾಸನಾಪ್ರಕರಣದಲ್ಲಿ ಎಲ್ಲಿಯೂ ಉಪಾಸಕರು ತಮ್ಮ ಶರೀರಗಳಿ ಗಿಂತ ಬೇರೆಯಾದ ದೇವತೆಗಳೇ ಮೊದಲಾದವರ ಶರೀರಗಳನ್ನು ಹುಟ್ಟಿ ಸುವರೆಂಬ ಮಾತು ಬಂದಿಲ್ಲ. ದೇವತೆಗಳು ಮೊದಲಾದವರ ಉತ್ಪತ್ತಿ ಗಿಂತ ಮುಂಚೆಯೆ ಸಾಕ್ಷಾತ್ಪರಬ್ರಹ್ಮನಿಂದ ಹಿರಣ್ಯಗರ್ಭನು ಹುಟ್ಟಿದ ನೆಂದು ಹೇಳಲಾಗಿದೆ. ಹೀಗೆ ಅವನು ಪರಬ್ರಹ್ಮಕ್ಕೆ ಬಹು ಹತ್ತಿರದ ವನಾದ್ದರಿಂದ ಉಳಿದೆಲ್ಲವನ್ನೂ ಹುಟ್ಟಿಸುವ ಸಾಮರ್ಥ್ಯವು ಅವನಲ್ಲಿ ಕಂಡುಬಂದಿದೆ. ಮನು ಮೊದಲಾದ ಎಷ್ಟೋ ಜನಗಳಾದ ಮೇಲೆ ಹಿರಣ್ಯಗರ್ಭನಿಂದ ಜನ್ಮವನ್ನು ಪಡೆದಿರುವ ಉಪಾಸಕರು ಪರಬ್ರಹ್ಮನಿಗೆ ಎಷ್ಟೋ ದೂರದವರು. ಆದ್ದರಿಂದ ಅವರಿಗೆ ಜಗತ್ತನ್ನು ಹುಟ್ಟಿಸುವ ಸಾಮರ್ಥ್ಯವಿಲ್ಲ. —೧೭

ಪೂ — ಪುರುಷಸೂಕ್ತದಲ್ಲಿ ಪರಮಾತ್ಮನೆ ದೇವತೆಗಳು ಮೊದಲಾದವರನ್ನು ಹುಟ್ಟಿಸಿದನೆಂದಿರುವದರಿಂದ ಉಪಾಸಕರಿಗೆ ಹೇಗೋ ಹಾಗೆ ಹಿರಣ್ಯ ಗರ್ಭನಿಗೆ ಕೂಡ ಜಗತ್ತನ್ನು ಹುಟ್ಟಿಸುವ ಸಾಮರ್ಥ್ಯವಿಲ್ಲವೆಂದು ಹೇಳಬೇಕಾಗುವದಲ್ಲ ! —೧೮

ಸಿ— ಹಾಗಲ್ಲ. ಪರಬ್ರಹ್ಮನ ಅಪ್ಪಣೆಯನ್ನು ತಲೆಯಮೇಲೆ ಹೊತ್ತು ನಡೆ ಸುವವನಾಗಿ ಬ್ರಹ್ಮಾಂಡವೆಂಬ ಮಂಡಲದ ಮೇಲೆ ಅಭಿಮಾನಿಯೆನಿಸಿ ಬ್ರಹ್ಮಲೋಕದಲ್ಲಿ ನಾಲ್ಕು ಮುಖಗಳಿಂದ ಕೂಡಿದ ಲೀಲಾವಿಗ್ರಹ ವನ್ನು ಧರಿಸಿಕೊಂಡಿರುವ ಹಿರಣ್ಯಗರ್ಭನು ಜಗತ್ತನ್ನು ಹುಟ್ಟಿಸುವನು. —೧೮

,, ನಿತ್ಯಮುಕ್ತನಾದ ಪರಮೇಶ್ವರನ ರೂಪವು ಸೂರ್ಯಮಂಡಲಕ್ಕೆ ಆಧಾರಭೂತವಾಗಿ ಬದಲಾವಣೆಯನ್ನು ಹೊಂದುವ ಸಾಕಾರಮಾತ್ರವೇ ಅಲ್ಲ. ಈ ಬ್ರಹ್ಮಾಂಡವೆಲ್ಲ ಅವನದೊಂದು ಅಂಶವೆಂದೂ ಇದರಮೇಲೆ ಅವನು ಇದರ ಮೂರರಷ್ಟಿರುವನೆಂದೂ ಶ್ರುತಿಯು ಬ್ರಹ್ಮಕ್ಕೆ ಎರಡು ರೂಪವನ್ನು ಹೇಳಿದೆ. ಆ ಯಾವ ಬದಲಾವಣೆಯನ್ನೂ ಹೊಂದದ

ರೂಪವು ಬ್ರಹ್ಮದ ಪ್ರತಿನಿಧಿಯನ್ನು ಆಶ್ರಯಿಸಿದವರಿಗೆ ದಕ್ಕುವದೆಂದು
ಹೇಳುವದಕ್ಕಾಗುವದಿಲ್ಲ. ಏಕೆಂದರೆ ಅವರು ಅದನ್ನು ಧ್ಯಾನಿಸಿರುವದಿಲ್ಲ.
ಆದ್ದರಿಂದ ಪರಮಾತ್ಮನ ಎರಡು ರೂಪಗಳಲ್ಲಿ ಅವರು ನಿರ್ಗುಣ
ರೂಪವನ್ನು ಪಡೆಯದೆ ಸಗುಣದಲ್ಲಿಯೇ ಇರುವರು. ಆ ಸಗುಣ
ದಲ್ಲಿಯೂ ಕೂಡ ಯಾವದೊಂದು ಅಡ್ಡಿಯೂ ಇಲ್ಲದ ಐಶ್ವರ್ಯವನ್ನು ಪಡೆ
ಯದೆ ಅಡ್ಡಿಗಳಿರುವ ಐಶ್ವರ್ಯದಲ್ಲಿಯೇ ಇರುವರು. ---೧೯

ಸಿ— ಪರಮಾತ್ಮನು ಹಿರಣ್ಯಗರ್ಭನಿಗಿಂತ ಬೇರೆಯಾಗಿಯೂ ಇರುವ
ನೆಂಬರ್ಥಕ್ಕೆ ಪುರುಷಸೂಕ್ತ ಒಂದೇ ಅಲ್ಲ; ಬೇರೆ ಶ್ರುತಿಗಳೂ ಸ್ಮೃತಿ
ಗಳೂ ಈ ಅಭಿಪ್ರಾಯವನ್ನು ಹೇಳುತ್ತವೆ. ಆದ್ದರಿಂದ ಪಂಚಮಹಾ
ಭೂತಗಳನ್ನು ಹುಟ್ಟಿಸಿದವನು ಪರಮಾತ್ಮನೆ. ಹಿರಣ್ಯಗರ್ಭನು ಪರ
ಮಾತ್ಮನ ಅಪ್ಪಣೆಯಂತೆ ಚರಾಚರವಾದ ಎಲ್ಲ ಭೌತಿಕಶರೀರಗಳನ್ನೂ
ಹುಟ್ಟಿಸಿದನು. —೨೦

,, ಹಿರಣ್ಯಗರ್ಭನಿಗೂ ಉಪಾಸಕರಿಗೂ ಭೋಗಮಾತ್ರದಲ್ಲಿ ಸಮಾನ
ವೆಂದು ಶ್ರುತಿಯ ಅಭಿಪ್ರಾಯ. ಉಪಾಸಕರು ಎಲ್ಲ ಬಗೆಯಿಂದಲೂ
ಹಿರಣ್ಯಗರ್ಭನಿಗೆ ಸರಿಯಲ್ಲ. ಅದ್ದರಿಂದ ಅವರು ದೇವತೆಗಳೆ
ಮೊದಲಾದವರ ದೇಹಗಳನ್ನು ಹುಟ್ಟಿಸಲಾರರು ಇನ್ನೊಂದು ವಿಷಯ
ವೇನೆಂದರೆ: ಬ್ರಹ್ಮಲೋಕದಲ್ಲಿ ವಾಸಮಾಡುತ್ತಿದ್ದ ಶಂತನು ಮೊದ
ಲಾದ ಉಪಾಸಕರು ಹಿರಣ್ಯಗರ್ಭನ ಶಾಪದಿಂದ ಭೂಲೋಕಕ್ಕೆ ಹಿಂದಿ
ರುಗಿದರೆಂದು ಪುರಾಣಗಳು ಹೇಳುವದರಿಂದ ಬ್ರಹ್ಮಲೋಕದಿಂದ
ಹಿಂದಿರುಗುವದುಂಟೆಂದು ತಿಳಿಯಬಾರದು. ಬ್ರಹ್ಮಲೋಕದಲ್ಲಿರುವ
ಯಾರೂ ರಾಗದ್ವೇಷಗಳನ್ನು ಮಾಡಕೂಡದೆಂಬ ನಿಯಮವಿದೆ. ಹಾಗೆ
ಮಾಡಿದವರನ್ನು ಶಿಕ್ಷಿಸುವದಕ್ಕಾಗಿ ಹಿರಣ್ಯಗರ್ಭನು ಅವರಿಗೆ ಶಾಪ
ವನ್ನು ಕೊಡುವದುಂಟು. ಅವರು ಭೂಲೋಕಕ್ಕೆ ಬಂದು ಕೆಲವುಕಾಲ
ಶಿಕ್ಷೆಯನ್ನು ಅನುಭವಿಸಿ ಮತ್ತೆ ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮನೊಡನೆ
ಮುಕ್ತಿಯನ್ನು ಹೊಂದುವರು. ಈ ವಿಷಯವೂ ಪುರಾಣದಲ್ಲಿದೆ. ದೇವತೆ
ಗಳು ಮೊದಲಾದ ಎಲ್ಲರ ಭೌತಿಕಶರೀರಗಳನ್ನು ಹುಟ್ಟಿಸುವ ಸಾಮ
ರ್ಥ್ಯವು ಅವರಿಗೆ ಬಂದರೆ ಅವರಲ್ಲಿ ಒಬ್ಬರಿಗೊಬ್ಬರಿಗೆ ಕಲಹವುಂಟಾಗ

ಬಹುದು. ಆದ್ದರಿಂದ ಉಪಾಸಕರು ಹಿರಣ್ಯಗರ್ಭನ ಅಪ್ಪಣೆಯಂತೆ ತಮ್ಮ ಶರೀರಗಳನ್ನುಮಾತ್ರ ಹುಟ್ಟಿಸಿಕೊಳ್ಳಬಲ್ಲರೆಂದು ತಿಳಿಯಬೇಕು. ಆದ್ದರಿಂದ ಎಲ್ಲ ಭೌತಿಕ ಶರೀರಗಳನ್ನೂ ಹಿರಣ್ಯಗರ್ಭನೊಬ್ಬನೆ ಹುಟ್ಟಿಸುವನೆ ಹೊರತು ಉಪಾಸಕರಲ್ಲ. — ೨೧

**ಪೂ**— ಬ್ರಹ್ಮಲೋಕಕ್ಕೆ ಹೋದ ಎಲ್ಲರಿಗೂ ಬ್ರಹ್ಮನೊಡನೆ ಮುಕ್ತಿಯೆ ? ಅಥವಾ ಕೆಲವರಿಗೆ ಮುಕ್ತಿಯಾಗಿ ಕೆಲವರು ಅಲ್ಲಿ ಕೆಲವು ಕಾಲ ಭೋಗಿಸಿದ ಮೇಲೆ ಭೂಲೋಕಕ್ಕೆ ಮತ್ತೆ ಹಿಂದಿರುಗುವರೊ ಹೇಗೆ ?

ಸಿ— ಬ್ರಹ್ಮಲೋಕಕ್ಕೆ ಹೋದ ಎಲ್ಲ ಉಪಾಸಕರಿಗೂ ಮುಕ್ತಿಯೇ ಹೊರತು ಯಾರೂ ಮತ್ತೆ ಭೂಲೋಕ ಮೊದಲಾದವುಗಳಿಗೆ ಹಿಂದಿರುಗುವದಿಲ್ಲ. ಹೀಗೆಂದು ಶ್ರುತಿಯು ಸ್ಪಷ್ಟವಾಗಿ ಹೇಳಿದೆ. ಇದರಿಂದ ಸಗುಣೋಪಾಸಕರಿಗೆ ಮಾತ್ರ ಮುಕ್ತಿಯನ್ನು ಹೇಳಿದಂತಾಗಿ ನಿರ್ಗುಣಸ್ವರೂಪವನ್ನರಿತವರ ಮಾತನ್ನು ಕೈಬಿಟ್ಟಂತಾಯಿತೆಂದು ತಿಳಿಯಬಾರದು. ಸಗುಣೋಪಾಸಕರಿಗೇ ಮುಕ್ತಿಯೆಂದು ಹೇಳಿದ ಮೇಲೆ ನಿರ್ಗುಣಸ್ವರೂಪವನ್ನರಿತ ಜ್ಞಾನಿಗಳಿಗೆ ಹಿಂದಿರುಗುವ ಸಂಭವವೆ ಇಲ್ಲವಾದ್ದರಿಂದ ಅವರ ವಿಷಯವನ್ನು ಹೇಳತಕ್ಕದ್ದಿಲ್ಲೆನೇಂದರ್ಥ. —೨೨

---

ಕಂ|| ಆವನಿನಪರಬ್ರಹ್ಮನೊ | ಆವನಿನವನೊಳಗೆಹೊಳೆದುದೋವೇದಾರ್ಥಂ||
ಆವಂ ಬುದ್ಧಿಗೆ ತಾ ಬೆಳ | ಕೀವವನಾಗಿಹನೊ ಅವಗೆ ನಾ ಶರಣೆಂಬೆಂ ||

ಓಂ ತತ್ಸತ್

---

# ಪರಿಶಿಷ್ಟ

---

## ಬ್ರಹ್ಮಸೂತ್ರಗಳು

---

ಅಧ್ಯಾಯ ೧ — .... .... .... ಪಾದ ೧

೧ ಅಥಾತೋ ಬ್ರಹ್ಮಜಿಜ್ಞಾಸಾ ೨ ಜನ್ಮಾದ್ಯಸ್ಯ ಯತಃ. ೩ ಶಾಸ್ತ್ರಯೋನಿತ್ವಾತ್. ೪ ತತ್ತು ಸಮನ್ವಯಾತ್. ೫ ಈಕ್ಷತೇರ್ನಾಶಬ್ದಮ್. ೬ ಗೌಣಶ್ಚೇನ್ನಾತ್ಮಶಬ್ದಾತ್. ೭ ತನ್ನಿಷ್ಠಸ್ಯ ಮೋಕ್ಷೋಪದೇಶಾತ್. ೮ ಹೇಯತ್ವಾವಚನಾಚ್ಚ ೯ ಸ್ವಾಪ್ಯಯಾತ್. ೧೦ ಗತಿಸಾಮಾನ್ಯಾತ್. ೧೧ ಶ್ರುತತ್ವಾಚ್ಚ. ೧೨ ಆನನ್ದಮಯೋಽಭ್ಯಾಸಾತ್. ೧೩ ವಿಕಾರಶಬ್ದಾನ್ನೇತಿಚೇನ್ನ ಪ್ರಾಚುರ್ಯಾತ್. ೧೪ ತದ್ಧೇತುವ್ಯಪದೇಶಾಚ್ಚ. ೧೫ ಮಾನ್ತ್ರವರ್ಣಿಕಮೇವ ಚ ಗೀಯತೇ. ೧೬ ನೇತರೋಽನುಪಪತ್ತೇಃ. ೧೭ ಭೇದವ್ಯಪದೇಶಾಚ್ಚ. ೧೮ ಕಾಮಾಚ್ಚ ನಾನುಮಾನಾಪೇಕ್ಷಾ. ೧೯ ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ. ೨೦ ಅನ್ತಸ್ತದ್ಧರ್ಮೋಪದೇಶಾತ್. ೨೧ ಭೇದವ್ಯಪದೇಶಾಚ್ಚಾನ್ಯಃ. ೨೨ ಆಕಾಶಸ್ತಲ್ಲಿಙ್ಗಾತ್. ೨೩ ಅತ ಏವ ಪ್ರಾಣಃ ೨೪ ಜ್ಯೋತಿಶ್ಚರಣಾಭಿಧಾನಾತ್ ೨೫ ಛನ್ದೋಽಭಿಧಾನಾನ್ನೇತಿ ಚೇನ್ನ ತಥಾ ಚೇತೋಽರ್ಪಣನಿಗದಾತ್ತಥಾ ಹಿ ದರ್ಶನಮ್. ೨೬ ಭೂತಾದಿಪಾದವ್ಯಪದೇಶೋಪಪತ್ತೇಶ್ಚೈವಮ್. ೨೭ ಉಪದೇಶಭೇದಾನ್ನೇತಿ ಚೇನ್ನೋಭಯಸ್ಮಿನ್ನಪ್ಯವಿರೋಧಾತ್. ೨೮ ಪ್ರಾಣಸ್ತಥಾನುಗಮಾತ್. ೨೯ ನ ವಕ್ತುರಾತ್ಮೋಪದೇಶಾದಿತಿ ಚೇದಧ್ಯಾತ್ಮಸಮ್ಬನ್ಧಭೂಮಾ ಹ್ಯಸ್ಮಿನ್. ೩೦ ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್. ೩೧ ಜೀವಮುಖ್ಯಪ್ರಾಣಲಿಙ್ಗಾನ್ನೇತಿ ಚೇನ್ನೋಪಾಸಾತ್ರೈವಿಧ್ಯಾದಾಶ್ರಿತತ್ವಾದಿಹ ತದ್ಯೋಗಾತ್.

---

ಪಾದ ೨

೧ ಸರ್ವತ್ರಪ್ರಸಿದ್ಧೋಪದೇಶಾತ್. ೨ ವಿವಕ್ಷಿತಗುಣೋಪಪತ್ತೇಶ್ಚ. ೩ ಅನುಪಪತ್ತೇಸ್ತು ನ ಶಾರೀರಃ. ೪ ಕರ್ಮಕರ್ತೃವ್ಯಪದೇಶಾಚ್ಚ. ೫ ಶಬ್ದವಿಶೇಷಾತ್. ೬ ಸ್ಮೃತೇಶ್ಚ. ೭ ಅರ್ಭಕೌಕಸ್ತ್ವಾತ್ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ. ೮ ಸಮ್ಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್. ೯ ಅತ್ತಾ ಚರಾಚರಗ್ರಹಣಾತ್. ೧೦ ಪ್ರಕರಣಾಚ್ಚ. ೧೧ ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶ

ನಾತ್. ೧೨ ವಿಶೇಷಣಾಚ್ಚ. ೧೩ ಅನ್ತರ ಉಪಪತ್ತೇಃ. ೧೪ ಸ್ಥಾನಾದಿವ್ಯಪದೇಶಾಚ್ಚ. ೧೫ ಸುಖವಿಶಿಷ್ಟಾಭಿಧಾನಾದೇವ ಚ. ೧೬ ಶ್ರುತೋಪನಿಷತ್ಕಗತ್ಯಭಿಧಾನಾಚ್ಚ. ೧೭ ಅನವಸ್ಥಿತೇರಸಮ್ಭವಾಚ್ಚ ನೇತರಃ. ೧೮ ಅನ್ತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್. ೧೯ ನ ಚ ಸ್ಮಾರ್ತಮತದ್ಧರ್ಮಾಭಿಲಾಪಾತ್. ೨೦ ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ ೨೧ ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ. ೨೨ ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ. ೨೩ ರೂಪೋಪನ್ಯಾಸಾಚ್ಚ. ೨೪ ವೈಶ್ವಾನರಸಾಧಾರಣಶಬ್ದವಿಶೇಷಾತ್. ೨೫ ಸ್ಮರ್ಯಮಾಣಮನುಮಾನಂ ಸ್ಯಾದಿತಿ. ೨೬ ಶಬ್ದಾದಿಭ್ಯೋಽನ್ತಃ ಪ್ರತಿಷ್ಠಾನಾನ್ನೇತಿ ಚೇನ್ನ ತಥಾ ದೃಷ್ಟ್ಯುಪದೇಶಾದಸಮ್ಭವಾತ್ಪುರುಷಮಪಿ ಚೈನಮಧೀಯತೇ. ೨೭ ಅತಏವ ನ ದೇವತಾ ಭೂತಂ ಚ. ೨೮ ಸಾಕ್ಷಾದಪ್ಯವಿರೋಧಂ ಜೈಮಿನಿಃ. ೨೯ ಅಭಿವ್ಯಕ್ತೇರಿತ್ಯಾಶ್ಮರಥ್ಯಃ. ೩೦ ಅನುಸ್ಮೃತೇರ್ಬಾದರಿಃ. ೩೧ ಸಮ್ಪತ್ತೇರಿತಿ ಜೈಮಿನಿಸ್ತಥಾ ಹಿ ದರ್ಶಯತಿ. ೩೨ ಆಮನನ್ತಿ ಚೈನಮಸ್ಮಿನ್.

---

ಪಾದ ೩

೧ ದ್ಯುಭ್ವಾದ್ಯಾಯತನಂ ಸ್ವಶಬ್ದಾತ್. ೨ ಮುಕ್ತೋಪಸೃಪ್ಯವ್ಯಪದೇಶಾತ್. ೩ ನಾನುಮಾನಮತಚ್ಛಬ್ದಾತ್. ೪ ಪ್ರಾಣಭೃಚ್ಚ. ೫ ಭೇದವ್ಯಪದೇಶಾತ್. ೬ ಪ್ರಕರಣಾತ್. ೭ ಸ್ಥಿತ್ಯದನಾಭ್ಯಾಂ ಚ. ೮ ಭೂಮಾ ಸಮ್ಪ್ರಸಾದಾದಧ್ಯುಪದೇಶಾತ್. ೯ ಧರ್ಮೋಪಪತ್ತೇಶ್ಚ. ೧೦ ಅಕ್ಷರಮಮ್ಬರಾನ್ತಧೃತೇಃ. ೧೧ ಸಾ ಚ ಪ್ರಶಾಸನಾತ್. ೧೨ ಅನ್ಯಭಾವವ್ಯಾವೃತ್ತೇಶ್ಚ. ೧೩ ಈಕ್ಷತಿಕರ್ಮವ್ಯಪದೇಶಾತ್ಸಃ. ೧೪ ದಹರ ಉತ್ತರೇಭ್ಯಃ. ೧೫ ಗತಿಶಬ್ದಾಭ್ಯಾಂ ತಥಾ ಹಿ ದೃಷ್ಟಂ ಲಿಙ್ಗಂ ಚ. ೧೬ ಧೃತೇಶ್ಚ ಮಹಿಮ್ನೋಽಸ್ಯಾಸ್ಮಿನ್ನುಪಲಬ್ಧೇಃ. ೧೭ ಪ್ರಸಿದ್ಧೇಶ್ಚ. ೧೮ ಇತರಪರಾಮರ್ಶಾತ್ಸ ಇತಿ ಚೇನ್ನಾಸಮ್ಭವಾತ್. ೧೯ ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು. ೨೦ ಅನ್ಯಾರ್ಥಶ್ಚ ಪರಾಮರ್ಶಃ. ೨೧ ಅಲ್ಪಶ್ರುತೇರಿತಿ ಚೇತ್ತದುಕ್ತಮ್. ೨೨ ಅನುಕೃತೇಸ್ತಸ್ಯ ಚ. ೨೩ ಅಪಿ ಚ ಸ್ಮರ್ಯತೇ. ೨೪ ಶಬ್ದಾದೇವ ಪ್ರಮಿತಃ. ೨೫ ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್. ೨೬ ತದುಪರ್ಯಪಿ ಬಾದರಾಯಣಸ್ಸಮ್ಭವಾತ್. ೨೭ ವಿರೋಧಃ ಕರ್ಮಣೀತಿ ಚೇನ್ನಾನೇಕಪ್ರತಿಪತ್ತೇರ್ದರ್ಶನಾತ್. ೨೮ ಶಬ್ದ ಇತಿ ಚೇನ್ನಾತಃ ಪ್ರಭವಾತ್ ಪ್ರತ್ಯಕ್ಷಾನುಮಾನಾಭ್ಯಾಮ್. ೨೯ ಅತ ಏವ ಚ ನಿತ್ಯತ್ವಮ್. ೩೦ ಸಮಾನನಾಮರೂಪತ್ವಾಚ್ಚಾವೃತ್ತಾವಪ್ಯವಿರೋಧೋ ದರ್ಶನಾತ್ಸ್ಮೃತೇಶ್ಚ. ೩೧ ಮಧ್ವಾದಿಷ್ವಸಮ್ಭವಾದನಧಿಕಾರಂ ಜೈಮಿನಿಃ. ೩೨ ಜ್ಯೋತಿಷಿ ಭಾವಾಚ್ಚ ೩೩ ಭಾವಂ ತು ಬಾದರಾಯಣೋಽಸ್ತಿ ಹಿ. ೩೪ ಶುಗಸ್ಯ ತದನಾದರಶ್ರವಣಾತ್ತದಾದ್ರವಣಾತ್ಸೂಚ್ಯತೇ

ಹಿ. ೩೫ ಕ್ಷತ್ರಿಯತ್ವಗತೇಶ್ಚೋತ್ತರತ್ರ ಚೈತ್ರರಥೇನ ಲಿಙ್ಗಾತ್. ೩೬ ಸಂಸ್ಕಾರಪರಾಮರ್ಶಾತ್ತದಭಾವಾಭಿಲಾಪಾಚ್ಚ. ೩೭ ತದಭಾವನಿರ್ಧಾರಣೇ ಚ ಪ್ರವೃತ್ತೇಃ ೩೮ ಶ್ರವಣಾಧ್ಯಯನಾರ್ಥಪ್ರತಿಷೇಧಾತ್ಸ್ಮೃತೇಶ್ಚ. ೩೯ ಕಮ್ಪನಾತ್. ೪೦ ಜ್ಯೋತಿರ್ದರ್ಶನಾತ್. ೪೧ ಆಕಾಶೋಽರ್ಥಾನ್ತರತ್ವಾದಿವ್ಯಪದೇಶಾತ್. ೪೨ ಸುಷುಪ್ತ್ಯುತ್ಕ್ರಾನ್ತ್ಯೋರ್ಭೇದೇನ. ೪೩ ಪತ್ಯಾದಿಶಬ್ದೇಭ್ಯಃ.

— —

ಪಾದ ೪

೧ ಆನುಮಾನಿಕಮಪ್ಯೇಕೇಷಾಮಿತಿ ಚೇನ್ನ ಶರೀರರೂಪಕವಿನ್ಯಸ್ತಗೃಹೀತೇರ್ದರ್ಶಯತಿ ಚ. ೨ ಸೂಕ್ಷ್ಮಂ ತು ತದರ್ಹತ್ವಾತ್. ೩ ತದಧೀನತ್ವಾದರ್ಥವತ್. ೪ ಜ್ಞೇಯತ್ವಾವಚನಾಚ್ಚ. ೫ ವದತೀತಿ ಚೇನ್ನ ಪ್ರಾಜ್ಞೋ ಹಿ ಪ್ರಕರಣಾತ್. ೬ ತ್ರಯಾಣಾಮೇವ ಚೈವಮುಪನ್ಯಾಸಃ ಪ್ರಶ್ನಶ್ಚ. ೭ ಮಹದ್ವಚ್ಚ. ೮ ಚಮಸವದವಿಶೇಷಾತ್ ೯ ಜ್ಯೋತಿರುಪಕ್ರಮಾ ತು ತಥಾ ಹ್ಯಧೀಯತ ಏಕೇ. ೧೦ ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ. ೧೧ ನ ಸಙ್ಖ್ಯೋಪಸಙ್ಗ್ರಹಾದಪಿ ನಾನಾಭಾವಾದತಿರೇಕಾಚ್ಚ. ೧೨ ಪ್ರಾಣಾದಯೋ ವಾಕ್ಯಶೇಷಾತ್. ೧೩ ಜ್ಯೋತಿಷೈಕೇಷಾಮಸತ್ಯನ್ನೇ. ೧೪ ಕಾರಣತ್ವೇನ ಚಾಕಾಶಾದಿಷು ಯಥಾವ್ಯಪದಿಷ್ಟೋಕ್ತೇಃ. ೧೫ ಸಮಾಕರ್ಷಾತ್. ೧೬ ಜಗದ್ವಾಚಿತ್ವಾತ್ ೧೭ ಜೀವಮುಖ್ಯಪ್ರಾಣಲಿಙ್ಗಾನ್ನೇತಿ ಚೇತ್ತದ್ವ್ಯಾಖ್ಯಾತಮ್. ೧೮ ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಮಪಿ ಚೈವಮೇಕೇ. ೧೯ ವಾಕ್ಯಾನ್ವಯಾತ್, ೨೦ ಪ್ರತಿಜ್ಞಾಸಿದ್ಧೇರ್ಲಿಙ್ಗಮಾಶ್ಮರಥ್ಯಃ. ೨೧ ಉತ್ಕ್ರಮಿಷ್ಯತ ಏವಂ ಭಾವಾದಿತ್ಯೌಡುಲೋಮಿಃ. ೨೨ ಅವಸ್ಥಿತೇರಿತಿ ಕಾಶಕೃತ್ಸ್ನಃ. ೨೩ ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾನ್ತಾನುಪರೋಧಾತ್. ೨೪ ಅಭಿಧ್ಯೋಪದೇಶಾಚ್ಚ. ೨೫ ಸಾಕ್ಷಾಚ್ಚೋಭಯಾಮ್ನಾನಾತ್. ೨೬ ಆತ್ಮಕೃತೇಃ ಪರಿಣಾಮಾತ್. ೨೭ ಯೋನಿಶ್ಚ ಹಿ ಗೀಯತೇ. ೨೮ ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ.

———

ಅಧ್ಯಾಯ ೨ — .... .... .... ಪಾದ ೧

೧ ಸ್ಮೃತ್ಯನವಕಾಶದೋಷಪ್ರಸಙ್ಗ ಇತಿ ಚೇನ್ನಾನ್ಯಸ್ಮೃತ್ಯನವಕಾಶದೋಷಪ್ರಸಙ್ಗಾತ್. ೨ ಇತರೇಷಾಂ ಚಾನುಪಲಬ್ಧೇಃ. ೩ ಏತೇನ ಯೋಗಃ ಪ್ರತ್ಯುಕ್ತಃ. ೪ ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್. ೫ ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್. ೬ ದೃಶ್ಯತೇ ತು. ೭ ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್. ೮ ಅಪೀತೌ ತದ್ವತ್ಪ್ರಸಙ್ಗಾದಸಮಞ್ಜಸಮ್. ೯ ನ ತು ದೃಷ್ಟಾನ್ತಭಾವಾತ್. ೧೦ ಸ್ವಪಕ್ಷದೋ

ಷಾಚ್ಚ. ೧೧ ತರ್ಕಾಪ್ರತಿಷ್ಠಾನಾದಪ್ಯನ್ಯಥಾನುಮೇಯಮಿತಿ ಚೇದೇವಮಪ್ಯವಿಮೋಕ್ಷಪ್ರಸಙ್ಗಃ. ೧೨ ಏತೇನ ಶಿಷ್ಟಾಪರಿಗ್ರಹಾ ಅಪಿ ವ್ಯಾಖ್ಯಾತಾಃ. ೧೩ ಭೋಕ್ತ್ರಾಪತ್ತೇರವಿಭಾಗಶ್ಚೇತ್ಸ್ಯಾಲ್ಲೋಕವತ್. ೧೪ ತದನನ್ಯತ್ವಮಾರಮ್ಭಣಶಬ್ದಾದಿಭ್ಯಃ. ೧೫ ಭಾವೇ ಚೋಪಲಬ್ಧೇಃ. ೧೬ ಸತ್ತ್ವಾಚ್ಚಾವರಸ್ಯ. ೧೭ ಅಸದ್ವ್ಯಪದೇಶಾನ್ನೇತಿ ಚೇನ್ನ ಧರ್ಮಾನ್ತರೇಣ ವಾಕ್ಯಶೇಷಾತ್. ೧೮ ಯುಕ್ತೇಃ ಶಬ್ದಾನ್ತರಾಚ್ಚ. ೧೯ ಪಟವಚ್ಚ. ೨೦ ಯಥಾ ಚ ಪ್ರಾಣಾದಿಃ. ೨೧ ಇತರವ್ಯಪದೇಶಾದ್ಧಿತಾಕರಣಾದಿದೋಷಪ್ರಸಕ್ತಿಃ. ೨೨ ಅಧಿಕಂ ತು ಭೇದನಿರ್ದೇಶಾತ್. ೨೩ ಅಶ್ಮಾದಿವಚ್ಚ ತದನುಪಪತ್ತಿಃ. ೨೪ ಉಪಸಂಹಾರದರ್ಶನಾನ್ನೇತಿ ಚೇನ್ನ ಕ್ಷೀರವದ್ಧಿ. ೨೫ ದೇವಾದಿವದಪಿ ಲೋಕೇ. ೨೬ ಕೃತ್ಸ್ನಪ್ರಸಕ್ತಿರ್ನಿರವಯವತ್ವಶಬ್ದಕೋಪೋ ವಾ. ೨೭ ಶ್ರುತೇಸ್ತು ಶಬ್ದಮೂಲತ್ವಾತ್. ೨೮ ಆತ್ಮನಿ ಚೈವಂ ವಿಚಿತ್ರಾಶ್ಚ ಹಿ. ೨೯ ಸ್ವಪಕ್ಷದೋಷಾಚ್ಚ. ೩೦ ಸರ್ವೋಪೇತಾ ಚ ತದ್ದರ್ಶನಾತ್. ೩೧ ವಿಕರಣತ್ವಾನ್ನೇತಿ ಚೇತ್ತದುಕ್ತಮ್. ೩೨ ನ ಪ್ರಯೋಜನವತ್ತ್ವಾತ್. ೩೩ ಲೋಕವತ್ತು ಲೀಲಾಕೈವಲ್ಯಮ್. ೩೪ ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ತಥಾ ಹಿ ದರ್ಶಯತಿ. ೩೫ ನ ಕರ್ಮಾವಿಭಾಗಾದಿತಿ ಚೇನ್ನಾನಾದಿತ್ವಾತ್. ೩೬ ಉಪಪದ್ಯತೇ ಚಾಪ್ಯುಪಲಭ್ಯತೇ ಚ. ೩೭ ಸರ್ವಧರ್ಮೋಪಪತ್ತೇಶ್ಚ

---

ಪಾದ ೨

೧ ರಚನಾನುಪಪತ್ತೇಶ್ಚ ನಾನುಮಾನಮ್. ೨ ಪ್ರವೃತ್ತೇಶ್ಚ. ೩ ಪಯೋಽಮ್ಬುವಚ್ಚೇತ್ತತ್ರಾಪಿ ೪ ವ್ಯತಿರೇಕಾನವಸ್ಥಿತೇಶ್ಚಾನಪೇಕ್ಷತ್ವಾತ್. ೫ ಅನ್ಯತ್ರಾಭಾವಾಚ್ಚ ನ ತೃಣಾದಿವತ್. ೬ ಅಭ್ಯುಪಗಮೇಽಪ್ಯರ್ಥಾಭಾವಾತ್ ೭ ಪುರುಷಾಶ್ಮವದಿತಿ ಚೇತ್ತಥಾಪಿ ೮ ಅಙ್ಗಿತ್ವಾನುಪಪತ್ತೇಶ್ಚ ೯ ಅನ್ಯಥಾನುಮಿತೌ ಚ ಜ್ಞಶಕ್ತಿವಿಯೋಗಾತ್ ೧೦ ವಿಪ್ರತಿಷೇಧಾಚ್ಚಾಸಮಞ್ಜಸಮ್. ೧೧ ಮಹದ್ದೀರ್ಘವದ್ವಾ ಹ್ರಸ್ವಪರಿಮಣ್ಡಲಾಭ್ಯಾಮ್. ೧೨ ಉಭಯಥಾಪಿ ನ ಕರ್ಮಾತಸ್ತದಭಾವಃ. ೧೩ ಸಮವಾಯಾಭ್ಯುಪಗಮಾಚ್ಚ ಸಾಮ್ಯಾದನವಸ್ಥಿತೇಃ. ೧೪ ನಿತ್ಯಮೇವ ಚ ಭಾವಾತ್. ೧೫ ರೂಪಾದಿಮತ್ತ್ವಾಚ್ಚ ವಿಪರ್ಯಯೋ ದರ್ಶನಾತ್. ೧೬ ಉಭಯಥಾ ಚ ದೋಷಾತ್. ೧೭ ಅಪರಿಗ್ರಹಾಚ್ಚಾತ್ಯನ್ತಮನಪೇಕ್ಷಾ. ೧೮ ಸಮುದಾಯ ಉಭಯಹೇತುಕೇಽಪಿ ತದಪ್ರಾಪ್ತಿಃ ೧೯ ಇತರೇತರಪ್ರತ್ಯಯತ್ವಾದಿತಿ ಚೇನ್ನೋತ್ಪತ್ತಿಮಾತ್ರನಿಮಿತ್ತತ್ವಾತ್. ೨೦ ಉತ್ತರೋತ್ಪಾದೇ ಚ ಪೂರ್ವನಿರೋಧಾತ್. ೨೧ ಅಸತಿ ಪ್ರತಿಜ್ಞೋಪರೋಧೋ ಯೌಗಪದ್ಯಮನ್ಯಥಾ. ೨೨ ಪ್ರತಿಸಙ್ಖ್ಯಾಪ್ರತಿಸಙ್ಖ್ಯಾನಿರೋಧಾಪ್ರಾಪ್ತಿರವಿಚ್ಛೇದಾತ್. ೨೩ ಉಭಯಥಾ ಚ ದೋಷಾತ್. ೨೪ ಆಕಾಶೇ ಚಾವಿಶೇಷಾತ್. ೨೫ ಅನುಸ್ಮೃತೇಶ್ಚ ೨೬ ನಾಸತೋಽದೃಷ್ಟತ್ವಾತ್. ೨೭ ಉದಾಸೀನಾನಾಮಪಿ ಚೈವಂ ಸಿದ್ಧಿಃ. ೨೮ ನಾಭಾವ ಉಪಲಬ್ಧೇಃ

೨೯ ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್. ೩೦ ನ ಭಾವೋಽನುಪಲಬ್ಧೇಃ. ೩೧ ಕ್ಷಣಿಕತ್ವಾಚ್ಚ. ೩೨ ಸರ್ವಥಾನುಪಪತ್ತೇಶ್ಚ. ೩೩ ನೈಕಸ್ಮಿನ್ನಸಮ್ಭವಾತ್. ೩೪ ಏವಂ ಚಾತ್ಮಾಕಾರ್ತ್ಸ್ನ್ಯಮ್. ೩೫ ನ ಚ ಪರ್ಯಾಯಾದಪ್ಯವಿರೋಧೋ ವಿಕಾರಾದಿಭ್ಯಃ ೩೬ ಅನ್ತ್ಯಾವಸ್ಥಿತೇಶ್ಚೋಭಯನಿತ್ಯತ್ವಾದವಿಶೇಷಃ. ೩೭ ಪತ್ಯುರಸಾಮಞ್ಜಸ್ಯಾತ್. ೩೮ ಸಮ್ಬನ್ಧಾನುಪಪತ್ತೇಶ್ಚ. ೩೯ ಅಧಿಷ್ಠಾನಾನುಪಪತ್ತೇಶ್ಚ. ೪೦ ಕರಣವಚ್ಚೇನ್ನ ಭೋಗಾದಿಭ್ಯಃ. ೪೧ ಅನ್ತವತ್ತ್ವಮಸರ್ವಜ್ಞತಾ ವಾ. ೪೨ ಉತ್ಪತ್ತ್ಯಸಮ್ಭವಾತ್. ೪೩ ನ ಚ ಕರ್ತುಃ ಕರಣಮ್ ೪೪ ವಿಜ್ಞಾನಾದಿಭಾವೇ ವಾ ತದಪ್ರತಿಷೇಧಃ. ೪೫ ವಿಪ್ರತಿಷೇಧಾಚ್ಚ.

— —

ಪಾದ ೩

೧ ನ ವಿಯದಶ್ರುತೇಃ. ೨ ಅಸ್ತಿ ತು. ೩ ಗೌಣ್ಯಸಮ್ಭವಾತ್. ೪ ಶಬ್ದಾಚ್ಚ. ೫ ಸ್ಯಾಚ್ಚೈಕಸ್ಯ ಬ್ರಹ್ಮಶಬ್ದವತ್. ೬ ಪ್ರತಿಜ್ಞಾಽಹಾನಿರವ್ಯತಿರೇಕಾಚ್ಛಬ್ದೇಭ್ಯಃ. ೭ ಯಾವದ್ವಿಕಾರಂ ತು ವಿಭಾಗೋ ಲೋಕವತ್. ೮ ಏತೇನ ಮಾತರಿಶ್ವಾ ವ್ಯಾಖ್ಯಾತಃ. ೯ ಅಸಮ್ಭವಸ್ತು ಸತೋಽನುಪಪತ್ತೇಃ. ೧೦ ತೇಜೋಽತಸ್ತಥಾ ಹ್ಯಾಹ. ೧೧ ಆಪಃ. ೧೨ ಪೃಥಿವ್ಯಧಿಕಾರರೂಪಶಬ್ದಾನ್ತರೇಭ್ಯಃ. ೧೩ ತದಭಿಧ್ಯಾನಾದೇವ ತು ತಲ್ಲಿಙ್ಗಾತ್ಸಃ. ೧೪ ವಿಪರ್ಯಯೇಣ ತು ಕ್ರಮೋಽತ ಉಪಪದ್ಯತೇ ಚ. ೧೫ ಅನ್ತರಾ ವಿಜ್ಞಾನಮನಸೀ ಕ್ರಮೇಣ ತಲ್ಲಿಙ್ಗಾದಿತಿ ಚೇನ್ನಾವಿಶೇಷಾತ್. ೧೬ ಚರಾಚರವ್ಯಪಾಶ್ರಯಸ್ತು ಸ್ಯಾತ್ತದ್ವ್ಯಪದೇಶೋ ಭಾಕ್ತಸ್ತದ್ಭಾವಭಾವಿತ್ವಾತ್. ೧೭ ನಾತ್ಮಾಽಶ್ರುತೇರ್ನಿತ್ಯತ್ವಾಚ್ಚ ತಾಭ್ಯಃ. ೧೮ ಜ್ಞೋಽತ ಏವ. ೧೯ ಉತ್ಕ್ರಾನ್ತಿಗತ್ಯಾಗತೀನಾಮ್. ೨೦ ಸ್ವಾತ್ಮನಾ ಚೋತ್ತರಯೋಃ. ೨೧ ನಾಣುರತಚ್ಛ್ರುತೇರಿತಿ ಚೇನ್ನೇತರಾಧಿಕಾರಾತ್. ೨೨ ಸ್ವಶಬ್ದೋನ್ಮಾನಾಭ್ಯಾಂ ಚ. ೨೩ ಅವಿರೋಧಶ್ಚನ್ದನವತ್. ೨೪ ಅವಸ್ಥಿತಿವೈಶೇಷ್ಯಾದಿತಿ ಚೇನ್ನಾಭ್ಯುಪಗಮಾದ್ಧೃದಿ ಹಿ. ೨೫ ಗುಣಾದ್ವಾ ಲೋಕವತ್. ೨೬ ವ್ಯತಿರೇಕೋ ಗನ್ಧವತ್. ೨೭ ತಥಾ ಚ ದರ್ಶಯತಿ. ೨೮ ಪೃಥಗುಪದೇಶಾತ್. ೨೯ ತದ್ಗುಣಸಾರತ್ವಾತ್ತು ತದ್ವ್ಯಪದೇಶಃ ಪ್ರಾಜ್ಞವತ್. ೩೦ ಯಾವದಾತ್ಮಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್. ೩೧ ಪುಂಸ್ತ್ವಾದಿವತ್ತ್ವಸ್ಯ ಸತೋಽಭಿವ್ಯಕ್ತಿಯೋಗಾತ್. ೩೨ ನಿತ್ಯೋಪಲಬ್ಧ್ಯನುಪಲಬ್ಧಿಪ್ರಸಙ್ಗೋಽನ್ಯತರನಿಯಮೋ ವಾಽನ್ಯಥಾ ೩೩ ಕರ್ತಾ ಶಾಸ್ತ್ರಾರ್ಥವತ್ತ್ವಾತ್. ೩೪ ವಿಹಾರೋಪದೇಶಾತ್. ೩೫ ಉಪಾದಾನಾತ್. ೩೬ ವ್ಯಪದೇಶಾಚ್ಚ ಕ್ರಿಯಾಯಾಂ ನ ಚೇನ್ನಿರ್ದೇಶವಿಪರ್ಯಯಃ. ೩೭ ಉಪಲಬ್ಧಿವದನಿಯಮಃ. ೩೮ ಶಕ್ತಿವಿಪರ್ಯಯಾತ್. ೩೯ ಸಮಾಧ್ಯಭಾವಾಚ್ಚ. ೪೦ ಯಥಾ ಚ ತಕ್ಷೋಭಯಥಾ. ೪೧ ಪರಾತ್ತು ತಚ್ಛ್ರುತೇಃ. ೪೨ ಕೃತಪ್ರಯತ್ನಾಪೇಕ್ಷಸ್ತು ವಿಹಿತಪ್ರತಿಷಿದ್ಧಾವೈಯರ್ಥ್ಯಾದಿಭ್ಯಃ. ೪೩ ಅಂಶೋ ನಾನಾವ್ಯಪದೇಶಾದನ್ಯಥಾ ಚಾಪಿ ದಾಶಕಿತವಾದಿತ್ವಮಧೀಯತ ಇತ್ಯೇಕೇ ೪೪ ಮನ್ತ್ರವರ್ಣಾಚ್ಚ

೪೫ ಅಪಿ ಚ ಸ್ಮರ್ಯತೇ. ೪೬ ಪ್ರಕಾಶಾದಿವನ್ನೈವಂ ಪರಃ. ೪೭ ಸ್ಮರನ್ತಿ ಚ. ೪೮ ಅನುಜ್ಞಾಪರಿಹಾರೌ ದೇಹಸಮ್ಬನ್ಧಾಜ್ಜ್ಯೋತಿರಾದಿವತ್. ೪೯ ಅಸನ್ತತೇಶ್ಚಾವ್ಯತಿಕರಃ. ೫೦ ಆಭಾಸ ಏವ ಚ. ೫೧ ಅದೃಷ್ಟಾನಿಯಮಾತ್ ೫೨ ಅಭಿಸನ್ಧ್ಯಾದಿಷ್ವಪಿ ಚೈವಮ್. ೫೩ ಪ್ರದೇಶಾದಿತಿ ಚೇನ್ನಾನ್ತರ್ಭಾವಾತ್.

---

ಪಾದ ೪

೧ ತಥಾ ಪ್ರಾಣಾಃ. ೨ ಗೌಣ್ಯಸಮ್ಭವಾತ್. ೩ ತತ್ಪ್ರಾಕ್ಶ್ರುತೇಶ್ಚ. ೪ ತತ್ಪೂರ್ವಕತ್ವಾದ್ವಾಚಃ. ೫ ಸಪ್ತಗತೇರ್ವಿಶೇಷಿತತ್ವಾಚ್ಚ. ೬ ಹಸ್ತಾದಯಸ್ತು ಸ್ಥಿತೇಽತೋ ನೈವಮ್. ೭ ಅಣವಶ್ಚ. ೮ ಶ್ರೇಷ್ಠಶ್ಚ. ೯ ನ ವಾಯುಕ್ರಿಯೇ ಪೃಥಗುಪದೇಶಾತ್. ೧೦ ಚಕ್ಷುರಾದಿವತ್ತು ತತ್ಸಹ ಶಿಷ್ಟ್ಯಾದಿಭ್ಯಃ. ೧೧ ಅಕರಣತ್ವಾಚ್ಚ ನ ದೋಷಸ್ತಥಾ ಹಿ ದರ್ಶಯತಿ. ೧೨ ಪಞ್ಚವೃತ್ತಿರ್ಮನೋವದ್ವ್ಯಪದಿಶ್ಯತೇ. ೧೩ ಅಣುಶ್ಚ. ೧೪ ಜ್ಯೋತಿರಾದ್ಯಧಿಷ್ಠಾನಂ ತು ತದಾಮನನಾತ್. ೧೫ ಪ್ರಾಣವತಾ ಶಬ್ದಾತ್. ೧೬ ತಸ್ಯ ಚ ನಿತ್ಯತ್ವಾತ್. ೧೭ ತ ಇನ್ದ್ರಿಯಾಣಿ ತದ್ವ್ಯಪದೇಶಾದನ್ಯತ್ರ ಶ್ರೇಷ್ಠಾತ್. ೧೮ ಭೇದಶ್ರುತೇಃ. ೧೯ ವೈಲಕ್ಷಣ್ಯಾಚ್ಚ. ೨೦ ಸಂಜ್ಞಾಮೂರ್ತಿಕ್ಲೃಪ್ತಿಸ್ತು ತ್ರಿವೃತ್ಕುರ್ವತ ಉಪದೇಶಾತ್. ೨೧ ಮಾಂಸಾದಿಭೌಮಂ ಯಥಾ ಶಬ್ದಮಿತರಯೋಶ್ಚ. ೨೨ ವೈಶೇಷ್ಯಾತ್ತು ತದ್ವಾದಸ್ತದ್ವಾದಃ.

---

ಅಧ್ಯಾಯ ೩ .... .... .... .... ಪಾದ ೧

೧ ತದನ್ತರಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ ಪ್ರಶ್ನನಿರೂಪಣಾಭ್ಯಾಮ್ ೨ ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್. ೩ ಪ್ರಾಣಗತೇಶ್ಚ. ೪ ಅಗ್ನ್ಯಾದಿಗತಿಶ್ರುತೇರಿತಿ ಚೇನ್ನ ಭಾಕ್ತತ್ವಾತ್. ೫ ಪ್ರಥಮೇಽಶ್ರವಣಾದಿತಿ ಚೇನ್ನ ತಾ ಏವ ಹ್ಯುಪಪತ್ತೇಃ. ೬ ಅಶ್ರುತತ್ವಾದಿತಿ ಚೇನ್ನೇಷ್ಟಾದಿಕಾರಿಣಾಂ ಪ್ರತೀತೇಃ. ೭ ಭಾಕ್ತಂ ವಾನಾತ್ಮವಿತ್ತ್ವಾತ್ತಥಾ ಹಿ ದರ್ಶಯತಿ. ೮ ಕೃತಾತ್ಯಯೇಽನುಶಯವಾನ್ದೃಷ್ಟಸ್ಮೃತಿಭ್ಯಾಂ ಯಥೇತಮನೇವಂ ಚ. ೯ ಚರಣಾದಿತಿ ಚೇನ್ನೋಪಲಕ್ಷಣಾರ್ಥೇತಿ ಕಾರ್ಷ್ಣಾಜಿನಿಃ. ೧೦ ಆನರ್ಥಕ್ಯಮಿತಿ ಚೇನ್ನ ತದಪೇಕ್ಷತ್ವಾತ್. ೧೧ ಸುಕೃತದುಷ್ಕೃತೇ ಏವೇತಿ ತು ಬಾದರಿಃ. ೧೨ ಅನಿಷ್ಟಾದಿಕಾರಿಣಾಮಪಿ ಚ ಶ್ರುತಮ್. ೧೩ ಸಂಯಮನೇ ತ್ವನುಭೂಯೇತರೇಷಾಮಾರೋಹಾವರೋಹೌ ತದ್ಗತಿದರ್ಶನಾತ್. ೧೪ ಸ್ಮರನ್ತಿ ಚ. ೧೫ ಅಪಿ ಚ ಸಪ್ತ. ೧೬ ತತ್ರಾಪಿ ಚ ತದ್ವ್ಯಾಪಾರಾದವಿರೋಧಃ. ೧೭ ವಿದ್ಯಾಕರ್ಮಣೋರಿತಿ ತು ಪ್ರಕೃತತ್ವಾತ್. ೧೮ ನ ತೃತೀಯೇ ತಥೋಪಲಬ್ಧೇಃ. ೧೯ ಸ್ಮರ್ಯತೇಽಪಿ ಚ ಲೋಕೇ. ೨೦ ದರ್ಶನಾಚ್ಚ. ೨೧ ತೃತೀಯಶಬ್ದಾವರೋಧಃ ಸಂಶೋಕಜಸ್ಯ. ೨೨ ತತ್ಸ್ವಾಭಾವ್ಯಾಪತ್ತಿರುಪಪತ್ತೇಃ.

ಪರೋವರೀಯಸ್ತ್ವಾದಿವತ್. ೮ ಸಂಜ್ಞಾತಶ್ಚೇತ್ತದುಕ್ತಮಸ್ತಿ ತು ತದಪಿ ೯ ವ್ಯಾಪ್ತೇಶ್ಚ
ಸಮಞ್ಜಸಮ್. ೧೦ ಸರ್ವಾಭೇದಾದನ್ಯತ್ರೇಮೇ. ೧೧ ಆನನ್ದಾದಯಃ ಪ್ರಧಾನಸ್ಯ. ೧೨
ಪ್ರಿಯಶಿರಸ್ತ್ವಾದ್ಯಪ್ರಾಪ್ತಿರುಪಚಯಾಪಚಯೌ ಹಿ ಭೇದೇ. ೧೩ ಇತರೇ ತ್ವರ್ಥಸಾ
ಮಾನ್ಯಾತ್. ೧೪ ಆಧ್ಯಾನಾಯ ಪ್ರಯೋಜನಾಭಾವಾತ್. ೧೫ ಆತ್ಮಶಬ್ದಾಚ್ಚ. ೧೬
ಆತ್ಮಗೃಹೀತಿರಿತರವದುತ್ತರಾತ್. ೧೭ ಅನ್ವಯಾದಿತಿ ಚೇತ್ಸ್ಯಾದವಧಾರಣಾತ್ ೧೮ ಕಾರ್ಯಾ
ಖ್ಯಾನಾದಪೂರ್ವಮ್. ೧೯ ಸಮಾನ ಏವಂ ಚಾಭೇದಾತ್. ೨೦ ಸಮ್ಬನ್ಧಾದೇವಮನ್ಯ
ತ್ರಾಪಿ. ೨೧ ನ ವಾ ವಿಶೇಷಾತ್. ೨೨ ದರ್ಶಯತಿ ಚ. ೨೩ ಸಂಭೃತಿದ್ಯುವ್ಯಾಪ್ತ್ಯಪಿ
ಚಾತಃ. ೨೪ ಪುರುಷವಿದ್ಯಾಯಾಮಿವ ಚೇತರೇಷಾಮನಾಮ್ನಾನಾತ್. ೨೫ ವೇಧಾ
ದ್ಯರ್ಥಭೇದಾತ್. ೨೬ ಹಾನೌ ತೂಪಾಯನಶಬ್ದಶೇಷತ್ವಾತ್ಕುಶಾಚ್ಛನ್ದಸ್ತುತ್ಯುಪಗಾನವ
ತ್ತದುಕ್ತಮ್. ೨೭ ಸಾಮ್ಪರಾಯೇ ತರ್ತವ್ಯಾಭಾವಾತ್ತಥಾ ಹ್ಯನ್ಯೇ. ೨೮ ಛನ್ದತ ಉಭ
ಯಾವಿರೋಧಾತ್. ೨೯ ಗತೇರರ್ಥವತ್ತ್ವಮುಭಯಥಾನ್ಯಥಾ ಹಿ ವಿರೋಧಃ. ೩೦
ಉಪಪನ್ನಸ್ತಲ್ಲಕ್ಷಣಾರ್ಥೋಪಲಬ್ಧೇರ್ಲೋಕವತ್. ೩೧ ಅನಿಯಮಃ ಸರ್ವಾಸಾಮ
ವಿರೋಧಶ್ಶಬ್ದಾನುಮಾನಾಭ್ಯಾಮ್. ೩೨ ಯಾವದಧಿಕಾರಮವಸ್ಥಿತಿರಾಧಿಕಾರಿಕಾ
ಣಾಮ್. ೩೩ ಅಕ್ಷರಧಿಯಾಂ ತ್ವವರೋಧಸ್ಸಾಮಾನ್ಯತದ್ಭಾವಾಭ್ಯಾಮೌಪಸದವತ್ತದು
ಕ್ತಮ್. ೩೪ ಇಯದಾಮನನಾತ್. ೩೫ ಅನ್ತರಾ ಭೂತಗ್ರಾಮವತ್ಸ್ವಾತ್ಮನಃ. ೩೬
ಅನ್ಯಥಾ ಭೇದಾನುಪಪತ್ತಿರಿತಿ ಚೇನ್ನೋಪದೇಶಾನ್ತರವತ್. ೩೭ ವ್ಯತಿಹಾರೋ ವಿಶಿಂ
ಷನ್ತಿ ಹೀತರವತ್ ೩೮ ಸೈವ ಹಿ ಸತ್ಯಾದಯಃ. ೩೯ ಕಾಮಾದೀತರತ್ರ ತತ್ರ ಚಾಯತ
ನಾದಿಭ್ಯಃ. ೪೦ ಆದರಾದಲೋಪಃ. ೪೧ ಉಪಸ್ಥಿತೇಽತಸ್ತದ್ವಚನಾತ್. ೪೨ ತನ್ನಿರ್ಧಾ
ರಣಾನಿಯಮಸ್ತದ್ದೃಷ್ಟೇಃ ಪೃಥಗ್ಘ್ಯಪ್ರತಿಬನ್ಧಃ ಫಲಮ್. ೪೩ ಪ್ರದಾನವದೇವ
ತದುಕ್ತಮ್. ೪೪ ಲಿಙ್ಗಭೂಯಸ್ತ್ವಾತ್ತದ್ಧಿ ಬಲೀಯಸ್ತದಪಿ. ೪೫ ಪೂರ್ವವಿಕಲ್ಪಃ
ಪ್ರಕರಣಾತ್ಸ್ಯಾತ್ಕ್ರಿಯಾ ಮಾನಸವತ್. ೪೬ ಅತಿದೇಶಾಚ್ಚ. ೪೭ ವಿದ್ಯೈವ ತು ನಿರ್ಧಾ
ರಣಾತ್. ೪೮ ದರ್ಶನಾಚ್ಚ. ೪೯ ಶ್ರುತ್ಯಾದಿಬಲೀಯಸ್ತ್ವಾಚ್ಚ ನ ಬಾಧಃ. ೫೦ ಅನು
ಬನ್ಧಾದಿಭ್ಯಃ ಪ್ರಜ್ಞಾನ್ತರಪೃಥಕ್ತ್ವವದ್ದೃಷ್ಟಶ್ಚ ತದುಕ್ತಮ್ ೫೧ ನ ಸಾಮಾನ್ಯಾ
ದಪ್ಯುಪಲಬ್ಧೇರ್ಮೃತ್ಯುವನ್ನ ಹಿ ಲೋಕಾಪತ್ತಿಃ ೫೨ ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂ
ಯಸ್ತ್ವಾತ್ತ್ವನುಬನ್ಧಃ. ೫೩ ಏಕ ಆತ್ಮನಶ್ಶರೀರೇ ಭಾವಾತ್. ೫೪ ವ್ಯತಿರೇಕಸ್ತದ್ಭಾವಾ
ಭಾವಿತ್ವಾನ್ನ ತೂಪಲಬ್ಧಿವತ್ ೫೫ ಅಙ್ಗಾವಬದ್ಧಾಸ್ತು ನ ಶಾಖಾಸು ಹಿ ಪ್ರತಿವೇದಮ್
೫೬ ಮನ್ತ್ರಾದಿವದ್ವಾಽವಿರೋಧಃ ೫೭ ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾ ಹಿ ದರ್ಶ
ಯತಿ. ೫೮ ನಾನಾ ಶಬ್ದಾದಿಭೇದಾತ್. ೫೯ ವಿಕಲ್ಪೋಽವಿಶಿಷ್ಟಫಲತ್ವಾತ್. ೬೦ ಕಾ
ಮ್ಯಾಸ್ತು ಯಥಾಕಾಮಂ ಸಮುಚ್ಚೀಯೇರನ್ನ ವಾ ಪೂರ್ವಹೇತ್ವಭಾವಾತ್ ೬೧ ಅಙ್ಗೇ
ಷು ಯಥಾಶ್ರಯಭಾವಃ ೬೨ ಶಿಷ್ಟೇಶ್ಚ. ೬೩ ಸಮಾಹಾರಾತ್ ೬೪ ಗುಣಸಾಧಾರಣ್ಯ
ಶ್ರುತೇಶ್ಚ. ೬೫ ನ ವಾ ತತ್ಸಹಭಾವಾಶ್ರುತೇಃ. ೬೬ ದರ್ಶನಾಚ್ಚ.

೨೩ ನಾತಿಚಿರೇಣ ವಿಶೇಷಾತ್. ೨೪ ಅನ್ಯಾಧಿಷ್ಠಿತೇ ಪೂರ್ವವದಭಿಲಾಪಾತ್. ೨೫ ಅಶುದ್ಧಮಿತಿ ಚೇನ್ನ ಶಬ್ದಾತ್. ೨೬ ರೇತಸ್ಸಿಗ್ಯೋಗೋಽಥ. ೨೭ ಯೋನೇಃ ಶರೀರಮ್.

---

ಪಾದ ೨

೧ ಸನ್ಧ್ಯೇ ಸೃಷ್ಟಿರಾಹ ಹಿ. ೨ ನಿರ್ಮಾತಾರಂ ಚೈಕೇ ಪುತ್ರಾದಯಶ್ಚ. ೩ ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾತ್. ೪ ಸೂಚಕಶ್ಚ ಹಿ ಶ್ರುತೇರಾಚಕ್ಷತೇ ಚ ತದ್ವಿದಃ. ೫ ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬನ್ಧವಿಪರ್ಯಯೌ. ೬ ದೇಹಯೋಗಾದ್ವಾ ಸೋಽಪಿ. ೭ ತದಭಾವೋ ನಾಡೀಷು ತಚ್ಛ್ರುತೇರಾತ್ಮನಿ ಚ. ೮ ಅತಃ ಪ್ರಬೋಧೋಽಸ್ಮಾತ್. ೯ ಸ ಏವ ತು ಕರ್ಮಾನುಸ್ಮೃತಿಶಬ್ದವಿಧಿಭ್ಯಃ. ೧೦ ಮುಗ್ಧೇಽರ್ಧಸಮ್ಪತ್ತಿಃ ಪರಿಶೇಷಾತ್. ೧೧ ನ ಸ್ಥಾನತೋಽಪಿ ಪರಸ್ಯೋಭಯಲಿಙ್ಗಂ ಸರ್ವತ್ರ ಹಿ. ೧೨ ನ ಭೇದಾದಿತಿ ಚೇನ್ನ ಪ್ರತ್ಯೇಕಮತದ್ವಚನಾತ್. ೧೩ ಅಪಿ ಚೈವಮೇಕೇ. ೧೪ ಅರೂಪವದೇವ ಹಿ ತತ್ಪ್ರಧಾನತ್ವಾತ್. ೧೫ ಪ್ರಕಾಶವಚ್ಚಾವೈಯರ್ಥ್ಯಾತ್. ೧೬ ಆಹ ಚ ತನ್ಮಾತ್ರಮ್. ೧೭ ದರ್ಶಯತಿ ಚಾಥೋ ಅಪಿ ಸ್ಮರ್ಯತೇ. ೧೮ ಅತ ಏವ ಚೋಪಮಾ ಸೂರ್ಯಕಾದಿವತ್. ೧೯ ಅಮ್ಬುವದಗ್ರಹಣಾತ್ತು ನ ತಥಾತ್ವಮ್. ೨೦ ವೃದ್ಧಿಹ್ರಾಸಭಾಕ್ತ್ವಮನ್ತರ್ಭಾವಾದುಭಯಸಾಮಞ್ಜಸ್ಯಾದೇವಮ್ ೨೧ ದರ್ಶನಾಚ್ಚ. ೨೨ ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ. ೨೩ ತದವ್ಯಕ್ತಮಾಹ ಹಿ ೨೪ ಅಪಿ ಸಂರಾಧನೇ ಪ್ರತ್ಯಕ್ಷಾನುಮಾನಾಭ್ಯಾಮ್. ೨೫ ಪ್ರಕಾಶಾದಿವಚ್ಚಾವೈಶೇಷ್ಯಂ ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್. ೨೬ ಅತೋಽನನ್ತೇನ ತಥಾ ಹಿ ಲಿಙ್ಗಮ್". ೨೭ ಉಭಯವ್ಯಪದೇಶಾತ್ತ್ವಹಿಕುಣ್ಡಲವತ್. ೨೮ ಪ್ರಕಾಶಾಶ್ರಯವದ್ವಾ ತೇಜಸ್ತ್ವಾತ್. ೨೯ ಪೂರ್ವವದ್ವಾ. ೩೦ ಪ್ರತಿಷೇಧಾಚ್ಚ. ೩೧ ಪರಮತಸ್ಸೇತೂನ್ಮಾನಸಮ್ಬನ್ಧಭೇದವ್ಯಪದೇಶೇಭ್ಯಃ. ೩೨ ಸಾಮಾನ್ಯಾತ್ತು. ೩೩ ಬುದ್ಧ್ಯರ್ಥಃ ಪಾದವತ್. ೩೪ ಸ್ಥಾನವಿಶೇಷಾತ್ಪ್ರಕಾಶಾದಿವತ್. ೩೫ ಉಪಪತ್ತೇಶ್ಚ. ೩೬ ತಥಾನ್ಯಪ್ರತಿಷೇಧಾತ್. ೩೭ ಅನೇನ ಸರ್ವಗತತ್ವಮಾಯಾಮಶಬ್ದಾದಿಭ್ಯಃ. ೩೮ ಫಲಮತ ಉಪಪತ್ತೇಃ. ೩೯ ಶ್ರುತತ್ವಾಚ್ಚ. ೪೦ ಧರ್ಮಂ ಜೈಮಿನಿರತ ಏವ. ೪೧ ಪೂರ್ವಂ ತು ಬಾದರಾಯಣೋ ಹೇತುವ್ಯಪದೇಶಾತ್.

---

ಪಾದ ೩

೧ ಸರ್ವವೇದಾನ್ತಪ್ರತ್ಯಯಂ ಚೋದನಾದ್ಯವಿಶೇಷಾತ್. ೨ ಭೇದಾನ್ನೇತಿ ಚೇನ್ನೈಕಸ್ಯಾಮಪಿ. ೩ ಸ್ವಾಧ್ಯಾಯಸ್ಯ ತಥಾತ್ವೇನ ಹಿ ಸಮಾಚಾರೇಽಧಿಕಾರಾಚ್ಚ ಸವವಚ್ಚ ತನ್ನಿಯಮಃ. ೪ ದರ್ಶಯತಿ ಚ. ೫ ಉಪಸಂಹಾರೋಽರ್ಥಾಭೇದಾದ್ವಿಧಿಶೇಷವತ್ಸಮಾನೇ ಚ. ೬ ಅನ್ಯಥಾತ್ವಂ ಶಬ್ದಾದಿತಿ ಚೇನ್ನಾವಿಶೇಷಾತ್. ೭ ನ ವಾ ಪ್ರಕರಣಭೇದಾತ್

ಪಾದ ೪

೧ ಪುರುಷಾರ್ಥೋಽತಶ್ಶಬ್ದಾದಿತಿ ಬಾದರಾಯಣಃ. ೨ ಶೇಷತ್ವಾತ್ಪುರುಷಾರ್ಥವಾದೋ ಯಥಾನ್ಯೇಷ್ವಿತಿ ಜೈಮಿನಿಃ. ೩ ಆಚಾರದರ್ಶನಾತ್. ೪ ತಚ್ಛ್ರುತೇಃ ೫ ಸಮನ್ವಾರಮ್ಭಣಾತ್. ೬ ತದ್ವತೋ ವಿಧಾನಾತ್ ೭ ನಿಯಮಾಚ್ಚ. ೮ ಅಧಿಕೋಪದೇಶಾತ್ತು ಬಾದರಾಯಣಸ್ಯೈವಂ ತದ್ದರ್ಶನಾತ್. ೯ ತುಲ್ಯಂ ತು ದರ್ಶನಮ್. ೧೦ ಅಸಾರ್ವತ್ರಿಕೀ. ೧೧ ವಿಭಾಗಶ್ಶತವತ್. ೧೨ ಅಧ್ಯಯನಮಾತ್ರವತಃ. ೧೩ ನಾವಿಶೇಷಾತ್ ೧೪ ಸ್ತುತಯೇಽನುಮತಿರ್ವಾ. ೧೫ ಕಾಮಕಾರೇಣ ಚೈಕೇ. ೧೬ ಉಪಮರ್ದಂ ಚ. ೧೭ ಊರ್ಧ್ವರೇತಸ್ಸು ಚ ಶಬ್ದೇ ಹಿ. ೧೮ ಪರಾಮರ್ಶಂ ಜೈಮಿನಿರಚೋದನಾ ಚಾಪವದತಿ ಹಿ. ೧೯ ಅನುಷ್ಠೇಯಂ ಬಾದರಾಯಣಸ್ಸಾಮ್ಯಶ್ರುತೇಃ. ೨೦ ವಿಧಿರ್ವಾ ಧಾರಣವತ್. ೨೧ ಸ್ತುತಿಮಾತ್ರಮುಪಾದಾನಾದಿತಿ ಚೇನ್ನಾಪೂರ್ವತ್ವಾತ್. ೨೨ ಭಾವಶಬ್ದಾಚ್ಚ. ೨೩ ಪಾರಿಪ್ಲವಾರ್ಥಾ ಇತಿ ಚೇನ್ನ ವಿಶೇಷಿತತ್ವಾತ್. ೨೪ ತಥಾ ಚೈಕವಾಕ್ಯತೋಪಬನ್ಧಾತ್. ೨೫ ಅತ ಏವ ಚಾಗ್ನೀನ್ಧನಾದ್ಯನಪೇಕ್ಷಾ. ೨೬ ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇರಶ್ವವತ್. ೨೭ ಶಮದಮಾದ್ಯುಪೇತಸ್ಸ್ಯಾತ್ತಥಾಪಿ ತು ತದ್ವಿಧೇಸ್ತದಙ್ಗತಯಾ ತೇಷಾಮವಶ್ಯಾನುಷ್ಠೇಯತ್ವಾತ್. ೨೮ ಸರ್ವಾನ್ನಾನುಮತಿಶ್ಚ ಪ್ರಾಣಾತ್ಯಯೇ ತದ್ದರ್ಶನಾತ್. ೨೯ ಅಬಾಧಾಚ್ಚ. ೩೦ ಅಪಿ ಚ ಸ್ಮರ್ಯತೇ. ೩೧ ಶಬ್ದಶ್ಚಾತೋಽಕಾಮಕಾರೇ. ೩೨ ವಿಹಿತತ್ವಾಚ್ಚಾಶ್ರಮಕರ್ಮಾಪಿ. ೩೩ ಸಹಕಾರಿತ್ವೇನ ಚ. ೩೪ ಸರ್ವಥಾಪಿ ತ ಏವೋಭಯಲಿಙ್ಗಾತ್. ೩೫ ಅನಭಿಭವಂ ಚ ದರ್ಶಯತಿ. ೩೬ ಅನ್ತರಾ ಚಾಪಿ ತು ತದ್ದೃಷ್ಟೇಃ. ೩೭ ಅಪಿ ಚ ಸ್ಮರ್ಯತೇ ೩೮ ವಿಶೇಷಾನುಗ್ರಹಶ್ಚ. ೩೯ ಅತಸ್ತ್ವಿತರಜ್ಜ್ಯಾಯೋ ಲಿಙ್ಗಾಚ್ಚ ೪೦ ತದ್ಭೂತಸ್ಯ ತು ನಾತದ್ಭಾವೋ ಜೈಮಿನೇರಪಿ ನಿಯಮಾತದ್ರೂಪಾಭಾವೇಭ್ಯಃ. ೪೧ ನ ಚಾಧಿಕಾರಿಕಮಪಿ ಪತನಾನುಮಾನಾತ್ತದಯೋಗಾತ್. ೪೨ ಉಪಪೂರ್ವಮಪಿ ತ್ವೇಕೇ ಭಾವಮಶನವತ್ತದುಕ್ತಮ್. ೪೩ ಬಹಿಸ್ತೂಭಯಥಾಪಿ ಸ್ಮೃತೇರಾಚಾರಾಚ್ಚ ೪೪ ಸ್ವಾಮಿನಃ ಫಲಶ್ರುತೇರಿತ್ಯಾತ್ರೇಯಃ. ೪೫ ಆರ್ತ್ವಿಜ್ಯಮಿತ್ಯೌಡುಲೋಮಿಸ್ತಸ್ಮೈ ಹಿ ಪರಿಕ್ರೀಯತೇ. ೪೬ ಶ್ರುತೇಶ್ಚ ೪೭ ಸಹಕಾರ್ಯನ್ತರವಿಧಿಃ ಪಕ್ಷೇಣ ತೃತೀಯಂ ತದ್ವತೋ ವಿಧ್ಯಾದಿವತ್. ೪೮ ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ. ೪೯ ಮೌನವದಿತರೇಷಾಮಪ್ಯುಪದೇಶಾತ್. ೫೦ ಅನಾವಿಷ್ಕುರ್ವನ್ನನ್ವಯಾತ್. ೫೧ ಐಹಿಕಮಪ್ಯಪ್ರಸ್ತುತಪ್ರತಿಬನ್ಧೇ ತದ್ದರ್ಶನಾತ್. ೫೨ ಏವಂ ಮುಕ್ತಿಫಲಾನಿಯಮಸ್ತದವಸ್ಥಾವಧೃತೇಸ್ತದವಸ್ಥಾವಧೃತೇಃ.

---

ಅಧ್ಯಾಯ ೪ — .... .... .... ಪಾದ ೧

೧ ಆವೃತ್ತಿರಸಕೃದುಪದೇಶಾತ್. ೨ ಲಿಙ್ಗಾಚ್ಚ. ೩ ಆತ್ಮೇತಿ ತೂಪಗಚ್ಛನ್ತಿ ಗ್ರಾಹಯನ್ತಿ ಚ. ೪ ನ ಪ್ರತೀಕೇ ನ ಹಿ ಸಃ. ೫ ಬ್ರಹ್ಮದೃಷ್ಟಿರುತ್ಕರ್ಷಾತ್. ೬ ಆದಿತ್ಯಾದಿ

ಮಂತಯಶ್ಚಾಙ್ಗ ಉಪಪತ್ತೇಃ. ೭ ಆಸೀನಸ್ಸಮ್ಭವಾತ್. ೮ ಧ್ಯಾನಾಚ್ಚ. ೯ ಅಚಲತ್ವಂ ಚಾಪೇಕ್ಷ್ಯ. ೧೦ ಸ್ಮರನ್ತಿ ಚ. ೧೧ ಯತ್ರೈಕಾಗ್ರತಾ ತತ್ರಾವಿಶೇಷಾತ್. ೧೨ ಆ ಪ್ರಾಯಣಾತ್ತತ್ರಾಪಿ ಹಿ ದೃಷ್ಟಮ್. ೧೩ ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್. ೧೪ ಇತರಸ್ಯಾಪ್ಯೇವಮಸಂಶ್ಲೇಷಃ ಪಾತೇ ತು. ೧೫ ಅನಾರಬ್ಧಕಾರ್ಯೇ ಏವ ತು ಪೂರ್ವೇ ತದವಧೇಃ. ೧೬ ಅಗ್ನಿಹೋತ್ರಾದಿ ತು ತತ್ಕಾರ್ಯಾಯೈವ ತದ್ದರ್ಶನಾತ್. ೧೭ ಅತೋಽನ್ಯಾಪಿ ಹ್ಯೇಕೇಷಾಮುಭಯೋಃ. ೧೮ ಯದೇವ ವಿದ್ಯಯೇತಿ ಹಿ. ೧೯ ಭೋಗೇನ ತ್ವಿತರೇ ಕ್ಷಪಯಿತ್ವಾ ಸಮ್ಪದ್ಯತೇ.

---

ಪಾದ ೨

೧ ವಾಙ್ಮನಸಿ ದರ್ಶನಾಚ್ಛಬ್ದಾಚ್ಚ. ೨ ಅತ ಏವ ಚ ಸರ್ವಾಣ್ಯನು. ೩ ತನ್ಮನಃ ಪ್ರಾಣ ಉತ್ತರಾತ್. ೪ ಸೋಽಧ್ಯಕ್ಷೇ ತದುಪಗಮಾದಿಭ್ಯಃ. ೫ ಭೂತೇಷು ತಚ್ಛ್ರುತೇಃ. ೬ ನೈಕಸ್ಮಿನ್ದರ್ಶಯತೋ ಹಿ. ೭ ಸಮಾನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ. ೮ ತದಾಽಪೀತೇಸ್ಸಂಸಾರವ್ಯಪದೇಶಾತ್. ೯ ಸೂಕ್ಷ್ಮಂ ಪ್ರಮಾಣತಶ್ಚ ತಥೋಪಲಬ್ಧೇಃ. ೧೦ ನೋಪಮರ್ದೇನಾತಃ. ೧೧ ಅಸ್ಯೈವ ಚೋಪಪತ್ತೇರೇಷ ಊಷ್ಮಾ. ೧೨ ಪ್ರತಿಷೇಧಾದಿತಿ ಚೇನ್ನ ಶಾರೀರಾತ್. ೧೩ ಸ್ಪಷ್ಟೋ ಹ್ಯೇಕೇಷಾಮ್. ೧೪ ಸ್ಮರ್ಯತೇ ಚ. ೧೫ ತಾನಿ ಪರೇ ತಥಾ ಹ್ಯಾಹ. ೧೬ ಅವಿಭಾಗೋ ವಚನಾತ್. ೧೭ ತದೋಕೋಽಗ್ರಜ್ವಲನಂ ತತ್ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತ್ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತಶ್ಶತಾಧಿಕಯಾ. ೧೮ ರಶ್ಮ್ಯನುಸಾರೀ. ೧೯ ನಿಶಿ ನೇತಿ ಚೇನ್ನ ಸಮ್ಬನ್ಧಸ್ಯ ಯಾವದ್ದೇಹಭಾವಾತ್ ದರ್ಶಯತಿ ಚ. ೨೦ ಅತಶ್ಚಾಯನೇಽಪಿ ದಕ್ಷಿಣೇ. ೨೧ ಯೋಗಿನಃ ಪ್ರತಿ ಚ ಸ್ಮರ್ಯತೇ ಸ್ಮಾರ್ತೇ ಚೈತೇ.

---

ಪಾದ ೩

೧ ಅರ್ಚಿರಾದಿನಾ ತತ್ಪ್ರಥಿತೇಃ. ೨ ವಾಯುಮಬ್ದಾದವಿಶೇಷವಿಶೇಷಾಭ್ಯಾಮ್. ೩ ತಡಿತೋಽಧಿವರುಣಸ್ಸಮ್ಬನ್ಧಾತ್. ೪ ಆತಿವಾಹಿಕಾಸ್ತಲ್ಲಿಙ್ಗಾತ್. ೫ ಉಭಯವ್ಯಾಮೋಹಾತ್ತತ್ಸಿದ್ಧೇಃ. ೬ ವೈದ್ಯುತೇನೈವ ತತಸ್ತಚ್ಛ್ರುತೇಃ. ೭ ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ. ೮ ವಿಶೇಷಿತತ್ವಾಚ್ಚ. ೯ ಸಾಮೀಪ್ಯಾತ್ತು ತದ್ವ್ಯಪದೇಶಃ. ೧೦ ಕಾರ್ಯಾತ್ಯಯೇ ತದಧ್ಯಕ್ಷೇಣ ಸಹಾತಃ ಪರಮಭಿಧಾನಾತ್. ೧೧ ಸ್ಮೃತೇಶ್ಚ. ೧೨ ಪರಂ ಜೈಮಿನಿರ್ಮುಖ್ಯತ್ವಾತ್. ೧೩ ದರ್ಶನಾಚ್ಚ. ೧೪ ನ ಚ ಕಾರ್ಯೇ ಪ್ರತಿಪತ್ತ್ಯಭಿಸನ್ಧಿಃ. ೧೫ ಅಪ್ರತೀಕಾಲಮ್ಬನಾನ್ನಯತೀತಿ ಬಾದರಾಯಣ ಉಭಯಥಾಽದೋಷಾತ್ತತ್ಕ್ರತುಶ್ಚ. ೧೬ ವಿಶೇಷಂ ಚ ದರ್ಶಯತಿ.

---

ಪಾದ ೪

೧ ಸಂಪದ್ಯಾವಿರ್ಭಾವಸ್ಸ್ವೇನ ಶಬ್ದಾತ್. ೨ ಮುಕ್ತಃ ಪ್ರತಿಜ್ಞಾನಾತ್. ೩ ಆತ್ಮಾ ಪ್ರಕರಣಾತ್. ೪ ಅವಿಭಾಗೇನ ದೃಷ್ಟತ್ವಾತ್. ೫ ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ. ೬ ಚಿತಿ ತನ್ಮಾತ್ರೇಣ ತದಾತ್ಮಕತ್ವಾದಿತ್ಯೌಡುಲೋಮಿಃ. ೭ ಏವಮಪ್ಯುಪನ್ಯಾಸಾತ್ಪೂರ್ವಭಾವಾದವಿರೋಧಂ ಬಾದರಾಯಣಃ. ೮ ಸಙ್ಕಲ್ಪಾದೇವ ತು ತಚ್ಛ್ರುತೇಃ. ೯ ಅತ ಏವ ಚಾನನ್ಯಾಧಿಪತಿಃ. ೧೦ ಅಭಾವಂ ಬಾದರಿರಾಹ ಹ್ಯೇವಮ್. ೧೧ ಭಾವಂ ಜೈಮಿನಿರ್ವಿಕಲ್ಪಾಮನನಾತ್. ೧೨ ದ್ವಾದಶಾಹವದುಭಯವಿಧಂ ಬಾದರಾಯಣೋಽತಃ. ೧೩ ತನ್ವಭಾವೇ ಸನ್ಧ್ಯವದುಪಪತ್ತೇಃ. ೧೪ ಭಾವೇ ಜಾಗ್ರದ್ವತ್. ೧೫ ಪ್ರದೀಪವದಾವೇಶಸ್ತಥಾ ಹಿ ದರ್ಶಯತಿ. ೧೬ ಸ್ವಾಪ್ಯಯಸಮ್ಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ. ೧೭ ಜಗದ್ವ್ಯಾಪಾರವರ್ಜಂ ಪ್ರಕರಣಾದಸನ್ನಿಹಿತತ್ವಾಚ್ಚ. ೧೮ ಪ್ರತ್ಯಕ್ಷೋಪದೇಶಾನ್ನೇತಿ ಚೇನ್ನಾಧಿಕಾರಿಕಮಣ್ಡಲಸ್ಥೋಕ್ತೇಃ. ೧೯ ವಿಕಾರಾವರ್ತಿ ಚ ತಥಾ ಹಿ ಸ್ಥಿತಿಮಾಹ. ೨೦ ದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ. ೨೧ ಭೋಗಮಾತ್ರಸಾಮ್ಯಲಿಙ್ಗಾಚ್ಚ. ೨೨ ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾದಿತಿ.

---

ಓಂ ತತ್ಸತ್

---

ವಿ. ಎಂ. ವಿ. ಪ್ರೆಸ್, ಬೆಂಗಳೂರು ಸಿಟಿ.



ಜನರಿಗೆಲ್ಲ ಒಳ್ಳೆಯದಾಗಲಿ.

ಅರಸರು ದೇಶವನ್ನು ನ್ಯಾಯದಿಂದ ಕಾಪಾಡಲಿ.

ಆಕಳುಗಳಿಗೂ ಬ್ರಾಹ್ಮಣರಿಗೂ ಯಾವಾಗಲೂ ಮಂಗಲವಾಗಲಿ.

ಎಲ್ಲ ಲೋಕಗಳವರೂ ಸುಖಿಗಳಾಗಿರಲಿ.

